# ಸಂಸ್ಕೃತ ಲೋಕೋಕ್ತಿಗಳು
ಮತ್ತು
# ಕವಿಸೂಕ್ತಿಗಳು

ಮನವಿ - ವಿವರಣೆ

ಸಂಪಾದಕ
ಎಚ್. ಎಸ್. ಅಚ್ಚಪ್ಪ



ಮೈಸೂರು






# ಸಂಸ್ಕೃತ

# ಲೋಕೋಕ್ತಿಗಳು ಮತ್ತು ಕವಿಸೂಕ್ತಿಗಳು

ಮನವಿ - ವಿವರಣೆ

ಸಂಪಾದಕ

ಎಚ್. ಎಸ್. ಅಚ್ಚಪ್ಪ

ಮೈಸೂರು

೧೯೮೨




# ಪರಿವಿಡಿ

ಪುಟ ಸಂಖ್ಯೆ

| | |
|---|---|
| ಆರಿಕೆ | 5 |
| ಕೃತಜ್ಞತೆಗಳು | 6 |
| ಮನವಿಗಳು | 7 |
| An Appeal | 17 |
| ವಿದ್ವಾಂಸರ ಅಭಿಪ್ರಾಯಗಳು | 21 |
| ಒಂದು ಪರಿಚಯಾತ್ಮಕ ಲೇಖನ: ಡಾ. ಸಿ. ಪಿ. ಕೆ. | 35 |
| ಕೆಲವು ಮಾದರಿ ಸೂಕ್ತಿಗಳು | 39 |

# ಅರಿಕೆ

ಸಂಸ್ಕೃತ ಲೋಕೋಕ್ತಿಗಳು ಮತ್ತು ಕವಿಸೂಕ್ತಿಗಳು ಎಂಬ ಬೃಹದ್‌ಗ್ರಂಥದ ಮುದ್ರಣ ಕಾರ್ಯ ಮಂಗಳೂರಿನ ಶ್ರೀ ಶಾರದಾ ಮುದ್ರಣಾಲಯದಲ್ಲಿ ಪ್ರಾರಂಭವಾಗಿ ಭರದಿಂದ ಸಾಗುತ್ತಿದೆ. ಅದು ಭಾರಿ ಮುದ್ರಣಾಲಯವಾದುದರಿಂದ ಮುದ್ರಣ ಕಾರ್ಯವೇನೋ ಶೀಘ್ರವಾಗಿ—ಸುಮಾರು ಮೂರು ತಿಂಗಳುಗಳ ಒಳಗಾಗಿ—ಆಗಿಬಿಡುತ್ತದೆ. ಆದರೆ ಪುಸ್ತಕಗಳನ್ನು ಬಿಡಿಸಿಕೊಳ್ಳಲು ಮುದ್ರಣಾಲಯದವರಿಗೆ ಮುದ್ರಣ ವೆಚ್ಚವನ್ನು, ಅದು ಎಷ್ಟು ತಗಲುವುದೋ ಅಷ್ಟನ್ನು, ಪೂರ್ತಿಯಾಗಿ ಪಾವತಿ ಮಾಡಬೇಕಾಗುತ್ತದೆ. ಇಷ್ಟು ಜವಾಬ್ದಾರಿಯಿಂದ ಕೊಡಿದ ಕೆಲಸವನ್ನು ಉದಾರ ಮನಸ್ಸಿನಿಂದ ಕೈಗೆತ್ತಿಕೊಂಡು ತೃಪ್ತಿಕರವಾಗಿ ನೆರವೇರಿಸಿಕೊಟ್ಟವರಿಗೆ, ನ್ಯಾಯವಾಗಿ ಸಲ್ಲಬೇಕಾದ ಹಣವನ್ನು ಪಾವತಿ ಮಾಡುವ ವಿಷಯದಲ್ಲಿ ನಾನು ಸಾವಕಾಶ ಮಾಡುವಂತಿಲ್ಲ, ಮಾಡಲೂ ಬಾರದು. ಅಷ್ಟು ಹಣ ನನ್ನಲ್ಲಿಲ್ಲ. ಆದರೆ ಅದು — ಡಾ॥ ಎಂ. ಎನ್. ಶ್ರೀನಿವಾಸ್, ಅವರ The Remembered Village ಎಂಬ ಮಹತ್ತ್ವದ ಕೃತಿಗೆ ಫೋರ್ಡ್ ಪ್ರತಿಷ್ಠಾನದಿಂದ ಅಪ್ರಾರ್ಥಿತ ನೆರವು ದೊರತಂತೆ—ಆ ವೇಳೆಗೆ ಹೇಗೋ ಒದಗಿಯೇ ಒದಗುತ್ತದೆ ಎಂಬ ಭರವಸೆಯಿದೆ.

ಅವಶ್ಯವಾದ ಮೊಬಲಗನ್ನು ಕೂಡಿಸಲು ಈಗಿನಿಂದಲೇ ದೇವರ ಮೇಲೆ ಭಾರ ಹಾಕಿ ಪ್ರಯತ್ನವನ್ನೂ ಮಾಡುತ್ತಿದ್ದೇನೆ. ಹಣ ಒದಗಿದ ಕೂಡಲೇ ಅದನ್ನು ಮೊದಲು ಮುದ್ರಣಾಲಯದವರಿಗೆ ಕೊಟ್ಟು, ಅವರಿಂದ ಪುಸ್ತಕಗಳನ್ನು ತೆಗೆದುಕೊಂಡು, ಅವರಿಗೆ ಕೃತಜ್ಞತೆಗಳನ್ನು ಅರ್ಪಿಸಿ, ಅನಂತರ ಪ್ರಕಾಶನಪೂರ್ವ ಬೆಲೆಯನ್ನು ಕೊಟ್ಟು ಪ್ರೋತ್ಸಾಹಿಸಿರುವ ಘನತೆವೆತ್ತ ಕರ್ನಾಟಕ ರಾಜ್ಯ ಸರ್ಕಾರಕ್ಕೂ ಸಂಪನ್ನ ವ್ಯಕ್ತಿಗಳಿಗೂ ಪುಸ್ತಕವನ್ನು ಸಮರ್ಪಿಸುತ್ತೇನೆ.

ಈಗಾಗಲೇ ಸಾಕಷ್ಟು ಕಾಲ ವಿಳಂಬವಾಗಿದೆ. ಇನ್ನಾದರೂ ಪುಸ್ತಕ ಬೇಗ ಬರಲಿ ಎಂಬ ಉದ್ದೇಶದಿಂದ ನನ್ನ ಮನವಿಯನ್ನು ಮೂರನೆಯ ಬಾರಿಗೆ ಮಹಾಜನರ ಮುಂದಿಟ್ಟಿದ್ದೇನೆ. ಈವರೆಗಿನ ನನ್ನ ಎಲ್ಲ ಮನವಿಗಳೂ ಈ ಕಿರು ಹೊತ್ತಗೆಯಲ್ಲಿ ಅಡಕವಾಗಿವೆ.

ತಮ್ಮ ಸ್ವಂತ ಉಪಯೋಗಕ್ಕಾಗಿ ಪುಸ್ತಕಗಳನ್ನು ಕೊಂಡಿಟ್ಟುಕೊಳ್ಳಲು ಅಪೇಕ್ಷಿಸುವ ನಿಜವಾದ ಪುಸ್ತಕ ಪ್ರೇಮಿಗಳಿಗೆ ಕಡಮೆಯ ಬೆಲೆಗೆ ಪುಸ್ತಕ ದೊರೆಯಲೆಂಬ ಸದುದ್ದೇಶದಿಂದಲೂ, ಮುದ್ರಣಾಲಯದವರಿಂದ ಅವರಿಗೆ ಕೊಡಬೇಕಾದ ಮುದ್ರಣ ವೆಚ್ಚವನ್ನು ಸಂಪೂರ್ಣವಾಗಿ ಸಲ್ಲಿಸಿ ಪುಸ್ತಕಗಳನ್ನು ಬಿಡಿಸಿಕೊಳ್ಳಲು ನನಗೂ ಅನುಕೂಲವಾಗಲಿ ಎಂಬ ಅಭಿಪ್ರಾಯದಿಂದಲೂ ಈ ಕಾರ್ಯವನ್ನು ಕೈಗೊಳ್ಳಲಾಗಿದೆ.

ಮಹಾಜನರು ಇವನ್ನು ಪರಾಂಬರಿಸಿ ಯಥೋಚಿತವಾದ ನೆರವು ನೀಡಬೇಕೆಂದು ಬಿನ್ನವಿಸಿಕೊಳ್ಳುತ್ತೇನೆ. ಪ್ರಕಾಶನಪೂರ್ವ ಬೆಲೆಯನ್ನು ಕಳುಹಿಸುವವರು ತಮಗೆ ಎಷ್ಟು ಪ್ರತಿಗಳು ಬೇಕೋ ಅಷ್ಟಕ್ಕೆ ಮೊಬಲಗನ್ನು ಪೋಸ್ಟಲ್ ಮನಿಆರ್ಡರ್ ಅಥವಾ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಮಾತ್ರ ತಮ್ಮ ಶುಭಾಶಯಗಳೊಡನೆ ಕಳುಹಿಸಬೇಕೆಂಬುದಾಗಿಯೂ ಬಿನ್ನವಿಸಿಕೊಳ್ಳುತ್ತೇನೆ.

'ಪ್ರಾಗ್ ಜ್ವಾಲಿತಾತ್ ಪ್ರದೀಪಾದ್ ಹಿ ದೀಪಿತಾ ದೀಪ ಸಂತತಿಃ' (ಮೊದಲು ಹಚ್ಚಿಟ್ಟ ಒಂದು ಹಣತೆಯಿಂದ ದೀಪದಸಾಲುಗಳೇ ಬೆಳಗತೊಡಗುತ್ತವೆ). ಹಾಗೆ ಬೆಳಗುವ ಸಾಲು ದೀಪಗಳು ಹಚ್ಚಿಟ್ಟವರಿಗೇ ಅಲ್ಲದೆ ಇತರರಿಗೂ ಬೆಳಕು ಬೀರುತ್ತವೆ.

ಸಂಸ್ಕೃತ ಲೋಕೋಕ್ತಿಗಳು ಮತ್ತು ಕವಿಸೂಕ್ತಿಗಳು: ಮನವಿ–ವಿವರಣೆ ಇದು ಮನವಿ ವಿವರಣೆ ಅಷ್ಟೇ ಅಲ್ಲ. ಆ ಹೆಬ್ಬೊತ್ತಗೆಯ ಪ್ರವೇಶಿಕೆಯೂ ಮತ್ತು ಅದರ ಕರ್ತೃವಿನ ಹೋರಾಟದ ಬದುಕಿನ ಸೂಕ್ಷ್ಮಾಕಾರದ ಒಂದು ಚಿತ್ರಣವೂ ಆಗಿದೆ. ಇದು ವಿದ್ವಾಂಸರ ಲೇಖನಗಳಿಂದಲೂ ಲೇಖಕನ ಬೇಡಿಕೆಗಳಿಂದಲೂ ವ್ಯಕ್ತವಾಗುತ್ತದೆ.

9—9—1982.

ಎಚ್. ಎಸ್. ಅಚ್ಚಪ್ಪ

# ಕೃತಜ್ಞತೆಗಳು

ಸಂಸ್ಕೃತ ಲೋಕೋಕ್ತಿಗಳು ಮತ್ತು ಕವಿಸೂಕ್ತಿಗಳು ಪುಸ್ತಕದ ಮುದ್ರಣಕ್ಕಾಗಿ ಘನತೆವೆತ್ತ ಕರ್ನಾಟಕ ರಾಜ್ಯ ಸರ್ಕಾರದವರು ಉದಾರವಾಗಿ ದ್ರವ್ಯಸಹಾಯ ಮಾಡಿರುತ್ತಾರೆ. ಅವರಿಂದ ಆಗಿರುವ ಈ ಮಹದುಪಕಾರವನ್ನು ನಾನು ಅತ್ಯಂತ ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಈ ಮೊದಲೇ ಮಾಡಿಕೊಂಡ ನನ್ನ ವಿನಮ್ರ ಮನವಿಯ ಮುಖ್ಯಾಂಶಗಳನ್ನು ತಮ್ಮ ಜನಪ್ರಿಯ ಪತ್ರಿಕೆಗಳಲ್ಲಿ ಪ್ರಕಟಿಸಿ ಉಪಕರಿಸಿದ ಪತ್ರಿಕಾ ಸಂಪಾದಕರುಗಳಿಗೂ; ಮನವಿಗೆ ಓಗೊಟ್ಟು ಪುಸ್ತಕದ ಪ್ರಕಾಶನಪೂರ್ವ ಬೆಲೆಯನ್ನು ನಾನು ಕೇಳಿದ ಕೂಡಲೇ/(ಒಮ್ಮೊಮ್ಮೆ ಕೇಳಿಸಿಕೊಳ್ಳದೆಯೇ) ನಗುಮುಖದಿಂದ ಕೊಟ್ಟು, ತಮ್ಮ ಬಂಧು–ಮಿತ್ರರು ಹಾಗೂ ಅಭಿಮಾನಿಗಳಿಂದಲೂ ಕೊಡಿಸಿ ಉಪಕರಿಸಿರುವ ಮಹನೀಯರುಗಳಿಗೂ; ಪ್ರಕಾಶನಪೂರ್ವ ಬೆಲೆಯನ್ನು ಕೊಡುವುದಾಗಿ ತಿಳಿಸಿ, ಅದಕ್ಕಿಂತಲೂ ಮಿಗಿಲಾದ ಮೊತ್ತವನ್ನು ನಗದಾಗಿಯೋ ಚೆಕ್ ಮೂಲಕವೋ ಇತ್ತು ನನ್ನನ್ನು ಚಕಿತಗೊಳಿಸಿದ ಮಹಾಶಯರಿಗೂ; ಮೊಬಲಗನ್ನು ಕೈಗಿತ್ತಮೇಲೆ, 'ದಯವಿಟ್ಟು ಇದನ್ನು ಯಾರೊಡನೆಯೂ ತಿಳಿಸಬೇಡಿ, ಇದನ್ನು ಮರೆತುಬಿಡಿ' ಎಂದು ನನ್ನನ್ನೇ ಪ್ರಾರ್ಥಿಸಿಕೊಂಡ ಮಹಾನುಭಾವರಿಗೂ; ನಾನು ಕೈಸಾಲ ಕೇಳಿದಾಗಲೆಲ್ಲ 'ನನ್ನಲ್ಲಿ ಹಣವಿದ್ದರೆ ಇಲ್ಲವೆನ್ನುವುದಿಲ್ಲ, ನೀವು ಯಾವಾಗ ಬಂದು ಕೇಳಿದರೂ ಕೊಡುತ್ತೇನೆ' ಎಂದು ಹೇಳಿ ನಾನು ಅದೆಷ್ಟು ಬಾರಿ ಕೇಳಿದರೂ ಸ್ವಲ್ಪವೂ ಬೇಸರಪಟ್ಟುಕೊಳ್ಳದೆ ಹಣವನ್ನು ಕೊಟ್ಟು ಉಪಕರಿಸುತ್ತಿರುವ ಮತ್ತು ತಮ್ಮಲ್ಲಿ ಹಣವಿಲ್ಲದಿದ್ದಾಗ ಬೇರೆಯವರಿಂದ ಸಾಲ ತಂದು ನನಗೆ ಕೊಟ್ಟು ನನ್ನ ಕಷ್ಟಗಳನ್ನು ತಾತ್ಕಾಲಿಕವಾಗಿಯಾದರೂ, ಪರಿಹರಿಸಿರುವುದಲ್ಲದೆ ನಾನು ಈಗ ಕೈಗೊಂಡಿರುವ ಕಾರ್ಯವು ನಿರ್ವಿಘ್ನವಾಗಿ ನಡೆಯುವಂತೆ ನೋಡಿಕೊಂಡಿರುವ ಸುಸಂಭಾವಿತರಿಗೂ; ಪುಸ್ತಕವು ಶೀಘ್ರವಾಗಿ ಹೊರಬರಲಿ ಎಂಬ ಉದ್ದೇಶದಿಂದ, 'ಪ್ರೂಫ್‌ಗಳನ್ನು—ಚೇಸ್ ಪ್ರೂಫ್‌ಗಳನ್ನು ಸಹ—ನನಗೆ ಕಳುಹಿಸಬೇಡಿ, ದಯವಿಟ್ಟು ತಾವೇ ಅಲ್ಲಿಯೇ ಯಾರಿಗಾದರೂ ತಿಳಿದವರಿಗೆ ತೋರಿಸಿ, ತಿದ್ದಿಸಿ ಮುದ್ರಣವಾದ ಪುಸ್ತಕಗಳನ್ನು ಮಾತ್ರ ನನಗೆ ಕಳುಹಿಸಿ ಕೊಡಿ' ಎಂಬ ನನ್ನ ಪ್ರಾರ್ಥನೆಗೆ ಸಮ್ಮತಿಸಿ, ಪುಸ್ತಕವನ್ನು ಸಮರ್ಪಕವಾಗಿ ಮುದ್ರಿಸಿ ಕೊಡುವ ಹಿರಿಯ ಜವಾಬ್ದಾರಿಯನ್ನು ಧೈರ್ಯದಿಂದ ಹಾಗೂ ಸಂತೋಷದಿಂದ ವಹಿಸಿಕೊಂಡು ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸುತ್ತಿರುವ ಮಂಗಳೂರಿನ ಶ್ರೀ ಶಾರದಾ ಛಾಪಖಾನೆಯ ಮುಖ್ಯರಿಗೂ ಮತ್ತು ಅವರ ಸಹಾಯಕ ವರ್ಗದವರಿಗೂ ನಾನು ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಲ್ಲಿಸುತ್ತೇನೆ.

ಬಂಧುವರ್ಗದಿಂದಲೂ ನನಗೆ ಒಂದಲ್ಲ ಒಂದು ರೀತಿಯ ಸಹಾಯ ದೊರೆತಿದೆ. ಅವರಿಗೂ ನನ್ನ ಹೃತ್ಪೂರ್ವಕವಾದ ಧನ್ಯವಾದಗಳನ್ನು ಸಲ್ಲಿಸುತ್ತೇನೆ.

ಎಲ್ಲಕ್ಕೂ ಮಿಗಿಲಾಗಿ, 'ಇದೊಂದು ಲೋಕಸಂಗ್ರಹ ಕಾರ್ಯ'ವೆಂದು ಬಗೆದು ನನ್ನಿಂದ ಏನೊಂದು ಪ್ರತಿಫಲವನ್ನೂ ನಿರೀಕ್ಷಿಸದೆ ಎಲ್ಲ ರೀತಿಯಲ್ಲೂ ನನಗೆ ಹೃತ್ಪೂರ್ವಕವಾಗಿ ಸಹಾಯ ಮಾಡುತ್ತಿರುವ, 'ಸಖರಿಂದುನ್ನತ ವಸ್ತುವೇ' ಎಂಬ ಕವಿವಾಣಿಯನ್ನು ನಿಜವಾಗಿಸಿರುವ ಸಜ್ಜನಶ್ರೇಷ್ಠರಿಗೆ ನನ್ನ ಅನಂತ ವಂದನೆಗಳನ್ನು ಹೃತ್ಪೂರ್ವಕವಾಗಿ ಸಲ್ಲಿಸುತ್ತೇನೆ.

'ಮನವಿ ಮತ್ತು ವಿವರಣೆ'ಯ ಈ ಕಿರು ಹೊತ್ತಗೆಯನ್ನು ಅಲ್ಪಾವಧಿಯಲ್ಲಿ ಅಂದವಾಗಿ ಮುದ್ರಿಸಿಕೊಟ್ಟಿರುವ ಶ್ರೀ ಶಾರದಾ ಛಾಪಖಾನೆಯ ಮುಖ್ಯರಿಗೂ ಮತ್ತು ಅವರ ಸಹಾಯಕ ವರ್ಗದವರಿಗೂ ಮತ್ತೊಮ್ಮೆ ನನ್ನ ಗೌರವಪೂರ್ವಕ ನಮಸ್ಕಾರಗಳನ್ನು ಸಲ್ಲಿಸುತ್ತೇನೆ.

ಪರಮಾತ್ಮನು ಎಲ್ಲರಿಗೂ ಆಯುರಾರೋಗ್ಯ ಐಶ್ವರ್ಯಾದಿ ಸಮಸ್ತ ಸನ್ಮಂಗಳಗಳನ್ನೂ ಇತ್ತು ಸಂರಕ್ಷಿಸಲಿ, ಎಲ್ಲರಿಗೂ ಶ್ರೇಯಸ್ಸುಂಟಾಗಲಿ ಎಂದು ಬಯಸುತ್ತೇನೆ.

**ಎಚ್. ಎಸ್. ಅಚ್ಚಪ್ಪ**

# ಮನವಿ

ದಿನಾಂಕ: 9—9—1982.

ಸನ್ಮಾನ್ಯರೆ,

ಸಂಸ್ಕೃತ ಲೋಕೋಕ್ತಿಗಳು ಮತ್ತು ಕವಿಸೂಕ್ತಿಗಳು ಎಂಬ ಬೃಹದ್‌ಗ್ರಂಥವೊಂದನ್ನು ಪ್ರಕಟಿಸಲು ಹಲವಾರು ವರ್ಷಗಳಿಂದ ನಾನು ಪಡುತ್ತಿರುವ ಪ್ರಯತ್ನವನ್ನು ಈಗಾಗಲೇ ವಿನಂತಿ ಮಾಡಿಕೊಂಡಿರುವೆನಷ್ಟೆ.

ಪುಸ್ತಕದ ಪ್ರಕಟನೆಗಾಗಿ ಕರ್ಣಾಟಕ ರಾಜ್ಯ ಸರ್ಕಾರದವರು ಹಾಗೂ ನನ್ನ ಅಭಿಮಾನಿ ಮಿತ್ರರು 'ಪ್ರಕಾಶನಪೂರ್ವ ಬೆಲೆ'ಯ ರೂಪದಲ್ಲಿ ಕೊಟ್ಟಿರುವ ಮೊಬಲಗು, ಪುಸ್ತಕದ ಮುದ್ರಣವನ್ನು ಪ್ರಾರಂಭಿಸಲು ನಾನು ಮುದ್ರಣಾಲಯದವರಿಗೆ ಮುಂಗಡವಾಗಿ ಕೊಡಬೇಕಾದ ಹಣಕ್ಕೆ ಸ್ವಲ್ಪವೂ ಸಾಲದಾಗಿ ಪ್ರಕಟಣೆಯ ಕಾರ್ಯವನ್ನು ಕೈಬಿಡಬೇಕಾದ ಪರಿಸ್ಥಿತಿಯೊದಗಿತ್ತು.

ಇತ್ತೀಚೆಗೆ, ನನ್ನ ಕೆಲವರು ಹಿತೈಷಿಗಳ ನೆರವಿನಿಂದ ಅದು ನಿವಾರಣೆಯಾಯಿತು. **ಸ್ಟೇಟ್ ಬ್ಯಾಂಕ್ ಆಫ್ ಮೈಸೂರು** ಶಾಖೆಯೊಂದರಿಂದ ಸ್ವಲ್ಪ ಸಾಲ ದೊರೆತು ಪುಸ್ತಕದ ಮುದ್ರಣಕಾರ್ಯ ಪ್ರಾರಂಭವಾಗಿದೆ. ಗ್ರಂಥಸ್ಥ ಗಾದೆಗಳು ಪುಸ್ತಕವನ್ನು ಅಂದವಾಗಿ ಮುದ್ರಿಸಿ ಕೊಟ್ಟಿರುವ ಮಂಗಳೂರಿನ ಶ್ರೀ ಶಾರದಾ ಪ್ರೆಸ್ಸಿನ ಮುಖ್ಯರೇ ಈ ಪುಸ್ತಕವನ್ನೂ ಮುದ್ರಿಸಿ ಕೊಡಲು ಕೃಪೆಯಿಟ್ಟು ಒಪ್ಪಿಕೊಂಡಿದ್ದಾರೆ. ಇನ್ನು ಕೆಲವೇ ತಿಂಗಳುಗಳಲ್ಲಿ ಪುಸ್ತಕವು ಹೊರಬರಲಿದೆ. ಆದರೆ ಕೇವಲ ಒಂದು ಸಾವಿರ ಪ್ರತಿಗಳು ಮಾತ್ರ.

ಮುದ್ರಣ ಕಾಗದದ ಅಭಾವದ ಹಾಗೂ ಅಧಿಕ ಬೆಲೆಯ ಇಂದಿನ ಸಂದರ್ಭದಲ್ಲಿ ಇಂಥ ಬೃಹತ್ ಪ್ರಕಟಣೆಯ ಕೆಲಸಕ್ಕೆ ಕೈಹಾಕುವುದು ಹಾವಿನ ಹುತ್ತಕ್ಕೆ ಕೈ ತುರುಕಿ ಅಲ್ಲಿ ಕಟ್ಟಿರುವ ಜೇನು ಗೂಡನ್ನು ಕಿತ್ತು ತಂದು ಜೇನನ್ನು ಅಸಿಯುವ ಸಾಹಸವೇ ಆಗಿದೆ. ಆದರೆ, ದೈವಬಲವೊಂದಿದ್ದರೆ ಯಾವ ಪ್ರಯತ್ನವೂ ವಿಫಲವಾಗುವುದಿಲ್ಲ. ಹಸ್ತಪ್ರತಿಯು ಸಿದ್ಧವಾಗಿರುವುದಷ್ಟೇ ಅಲ್ಲದೆ ಖ್ಯಾತ ಮುದ್ರಣಾಲಯವೊಂದರಲ್ಲಿ ಮುದ್ರಣ ಪ್ರಾರಂಭವಾಗಿರುವುದು ಈ ಪ್ರಯತ್ನಕ್ಕೆ ದೈವಬಲವಿರುವುದೆಂಬುದಕ್ಕೆ ಅತ್ಯುತ್ತಮ ನಿದರ್ಶನ.

ಮಾಡುತ್ತಿರುವ ಪ್ರಯತ್ನವು ಮೇಲುನೋಟಕ್ಕೆ ಹುಚ್ಚುಸಾಹಸವೆಂದು ತೋರಬಹುದಾದರೂ ಅದು ಸಫಲವಾಗುವುದೆಂಬ ಸಂಪೂರ್ಣ ಭರವಸೆಯೂ ನನಗಿದೆ. **ಫಲಿಷ್ಯತೀತಿ ವಿಶ್ವಾಸಃ ಪ್ರಥಮಂ ಕಾರ್ಯಲಕ್ಷಣಂ ।** (ಮುಂದೆ ಫಲ ದೊರಕಿಯೇ ದೊರಕುತ್ತದೆ ಎಂಬ ವಿಶ್ವಾಸವೇ ಕೆಲಸವನ್ನು ಸಾಧಿಸುವ ಮೊದಲನೆಯ ಲಕ್ಷಣ).

ಹೀಗೆ ದೈವಬಲವೂ ಆತ್ಮವಿಶ್ವಾಸವೂ ಎರಡೂ ಜತೆಗೂಡಿರುವಾಗ ಕಷ್ಟಪಟ್ಟು ಕೆಲಸ ಮಾಡಿದರೆ, ನಿರಾಶೆಯನ್ನು ಹೊಂದದೆ ಯತ್ನವನ್ನು ಮುಂದೆ ಸಾಗಿಸಿದರೆ, ಟಿಟ್ಟಿಭಗಳಿಗೆ ದೈವಯೋಗದಿಂದ ನಾರದ ಮಹರ್ಷಿಗಳ ನೆರವೂ ಪಕ್ಷಿರಾಜನಾದ ಗರುಡನ ಸಹಾಯವೂ ದೊರೆತು ಶ್ರೀಹರಿಯ ಅನುಗ್ರಹವೂ ಲಭಿಸಿ ಅವುಗಳ ಇಷ್ಟಾರ್ಥ ಕೈಗೂಡಿದಂತೆ ಸಾಮಾನ್ಯ ಮನುಷ್ಯನಿಗೂ ದೈವಯೋಗದಿಂದ ಯಾರೋ ಒಬ್ಬರು ಮಹಾ ಪುರುಷರ ಸಮಾಗಮವಾಗಿ ಅವರ ಪ್ರಭಾವದಿಂದ ಅವನ ಅಪೇಕ್ಷೆಯು ಖಂಡಿತವಾಗಿಯೂ ಕೈಗೂಡುತ್ತದೆ. ಇದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ.

ಇನ್ನೊಂದು ವಿಷಯ. ಪುಸ್ತಕವು ಮಿತಪ್ರಮಾಣದಲ್ಲಿ ಹೊರಬರಲಿರುವುದರಿಂದ ಅದರ ಬೆಲೆಯನ್ನು ಕಡಮೆ ಇಡಲು ಸಾಧ್ಯವಾಗುವುದಿಲ್ಲ. ಬ್ಯಾಂಕು ಮೊದಲಾದವುಗಳಿಂದ ತಂದ ಸಾಲಸೋಲ

ಗಳು ಬಡ್ಡಿ ಸಮೇತ ತೀರಬೇಕು. ಅಂದಂದಿನ ಜೀವನ ಸಾಲ ಮಾಡದೆ ನಡೆಯುವಂತಾಗಬೇಕು. ಪುಸ್ತಕಕ್ಕೆ ಮರುಮುದ್ರಣಯೋಗವಿದ್ದರೆ, ಸಾಲವನ್ನು ಎತ್ತದೆ ಕಡೆಯಪಕ್ಷ ಒಂದು ಸಾವಿರ ಪ್ರತಿಗಳನ್ನಾದರೂ ಪ್ರಕಟಿಸಿ ನಾಡ ಬಾಂಧವರಿಗೆ ಸುಲಭ ಬೆಲೆಗಲ್ಲದಿದ್ದರೆ ಇದೇ ಬೆಲೆಗಾದರೂ ಒದಗಿಸುವಂತಾಗಬೇಕು. ಹಾಗಾಗಬೇಕಾದರೆ, ಪ್ರಸ್ತುತ ಮುದ್ರಣಕ್ಕೆ ಎಷ್ಟೇ ಕಡಮೆ ಎಂದರೂ ಒಂದೊಂದು ಪ್ರತಿಗೂ ಇನ್ನೂರ ಐವತ್ತು ರೂಪಾಯಿಗಳ ಬೆಲೆಯನ್ನು (ರೂ. 250/–) ಇಡಲೇ ಬೇಕಾಗುತ್ತದೆ. ಹಾಗೆ ಮಾಡಿದರೆ, ನಿರೀಕ್ಷಿತ ಫಲ ದೊರಕಿ ಸುದೈವದಿಂದ ಎಲ್ಲ ಉದ್ದೇಶಗಳೂ ಒಮ್ಮೆಗೇ ಈಡೇರಿದರೂ ಈಡೇರಬಹುದು. ಇಲ್ಲದಿದ್ದರೆ, ಕೆಲವು ಉದ್ಧೇಶಗಳಾದರೂ ನೆರವೇರಬಹುದು. ರಾಜ್ಯ ಸರ್ಕಾರದಿಂದ ಈ ಮೊದಲೇ ಸಾಕಷ್ಟು ಧನಸಹಾಯ ದೊರೆತಿದ್ದಿದ್ದರೆ, ಕೇಂದ್ರ ಸರ್ಕಾರವೂ ಆಶ್ರಯವಿತ್ತಿದ್ದರೆ ಇಂಥಾ ಯಾವ ಜಟಿಲ ಸಮಸ್ಯೆಯೂ ಉದ್ಭವಿಸುತ್ತಿರಲಿಲ್ಲ. ಕೇಂದ್ರ ಸರ್ಕಾರ ಸಹಾಯ ನೀಡಲಿಲ್ಲ. ನನ್ನ ಅಸಹಾಯಕ ಸ್ಥಿತಿ, ಏನು ಕಾರಣವೋ ನನಗೆ ತಿಳಿಯದು, ರಾಜ್ಯ ಸರ್ಕಾರದ ಉನ್ನತ ಮಟ್ಟದ ಅಧಿಕಾರಿಗಳ ಗಮನಕ್ಕೆ ಬರಲಿಲ್ಲ. ನಾನೂ ಸಹಾಯಧನಕ್ಕಾಗಿ ಸಾಕಷ್ಟು ಶ್ರಮಿಸಿ, ಈ ವರೆಗೂ ನಿರೀಕ್ಷಿಸಿ, ಇನ್ನು ಕಾಲ ವಿಳಂಬವಾದಲ್ಲಿ ಪುಸ್ತಕವು ಅಚ್ಚಾಗದೆ, ಪಟ್ಟ ಶ್ರಮವೆಲ್ಲ ವ್ಯರ್ಥವಾಗುತ್ತದೆಂದು ಬಗೆದು, ಕಟ್ಟಕಡೆಗೆ ನೀತಿಗೆ ಕಟ್ಟುಬಿದ್ದು, ರಾಜ್ಯ ಸರ್ಕಾರದೊಡನೆ ಮಾಡಿಕೊಂಡಿದ್ದ ಒಪ್ಪಂದಕ್ಕೆ ಕಟ್ಟುಬಿದ್ದು, ಆಡಿದ ಮಾತನ್ನು ಉಳಿಸಿಕೊಳ್ಳುವ ಸಲುವಾಗಿ, ಮರ್ಯಾದೆಯನ್ನು ಕಾಪಾಡಿಕೊಳ್ಳುವ ಸಲುವಾಗಿ ಇನ್ನೂರ ಐವತ್ತು ಪ್ರತಿಗಳನ್ನು ಮುದ್ರಣ ಮಾಡಲು ತೀರ್ಮಾನಿಸಿದೆ. ಅದನ್ನೇ ಮುದ್ರಣಾಲಯದವರಿಗೆ ತಿಳಿಸಿಯೂಬಿಟ್ಟೆ. ಅನಂತರ, ಅನಿರೀಕ್ಷಿತವಾಗಿ ಸ್ವಲ್ಪ ಹಣ ದೊರೆತು ಐನೂರು ಪ್ರತಿಗಳನ್ನು ಮುದ್ರಿಸುವಂತೆ 'ಪ್ರೆಸ್'ನವರಿಗೆ ತಿಳಿಸಿದೆ. ಮುದ್ರಣ ಪ್ರಾರಂಭವಾಯಿತು. ಕೆಲವು "ಫಾರಂ" ಗಳು ಅಚ್ಚಾದುವು. ತರುವಾಯ, ಮುನ್ನಿನಂತೆಯೇ ಇನ್ನಷ್ಟು ಹಣ ದೊರೆಯಿತು. ಒಂದು ಸಾವಿರ ಪ್ರತಿಗಳನ್ನು ಮುದ್ರಿಸುವಂತೆ ಪ್ರೆಸ್ಸಿನವರಿಗೆ ಮತ್ತೆ ತಿಳಿಸಿದೆ.

1974ರಲ್ಲಿ ಬೃಹತ್ ಸಂಖ್ಯೆಯಲ್ಲಿ ಪ್ರಕಟವಾಗಿರುವ ಮಹಾ ಸುಭಾಷಿತ ಸಂಗ್ರಹ ಎಂಬ ಗ್ರಂಥದಲ್ಲಿ—ಅದು ಈ ವರೆಗೆ 4 ಸಂಪುಟಗಳು ಪ್ರಕಟವಾಗಿವೆ—ಮೊದಲನೆಯ ಸಂಪುಟದಲ್ಲಿ 1873 ಸುಭಾಷಿತಗಳಿವೆ. ದೇವನಾಗರಿ ಲಿಪಿಯಲ್ಲಿ ಅಚ್ಚಾಗಿವೆ. ಅವಕ್ಕೆ 'ಇಂಗ್ಲಿಷ್'ನಲ್ಲಿ ಅನುವಾದಗಳಿವೆ. ಆ ಪುಸ್ತಕದ ಬೆಲೆ ಒಂದೊಂದು ಸಂಪುಟಕ್ಕೂ 150 ರೂಪಾಯಿಗಳು. ಈಗ ನಾನು ಪ್ರಕಟಿಸಲಿರುವ ಸಂಸ್ಕೃತ ಲೋಕೋಕ್ತಿಗಳು ಮತ್ತು ಕವಿಸೂಕ್ತಿಗಳು ಪುಸ್ತಕದಲ್ಲಿ 10,000 ಸೂಕ್ತಿಗಳು ಅಡಕವಾಗಿವೆ. ಅವಕ್ಕೆ ಕನ್ನಡದಲ್ಲಿ ಅನುವಾದಗಳಿವೆ. ಈ ಪುಸ್ತಕವು ಮುದ್ರಣವಾಗುತ್ತಿರುವುದು 1982ರಲ್ಲಿ. ಪ್ರಕಟವಾಗುವುದು, ಪ್ರಾಯಶಃ ವರ್ಷದ ಕಡೆಯಲ್ಲಿ. ಕಾಗದವು ಚಿನ್ನವಾಗಿರುವಾಗ ಅದರ ಬೆಲೆಯು ಗಗನಕ್ಕೇರಿರುವಾಗ ದಿನದಿನಕ್ಕೂ ಮುಗಿಲು ಮುಟ್ಟುತ್ತಿರುವಾಗ! ಅಲ್ಲದೆ, ಇದು ಮುದ್ರಣವಾಗುತ್ತಿರುವುದು ಖ್ಯಾತ ಮುದ್ರಣಾಲಯವೊಂದರಲ್ಲಿ. ಆ ಪುಸ್ತಕದ ಪ್ರಕಾಶಕರು ಪುಸ್ತಕಕ್ಕೆ ಇಟ್ಟ ಬೆಲೆಯಂತೆ ನಾನೂ ಈ ಪುಸ್ತಕಕ್ಕೆ ಬೆಲೆ ಇಡುವುದಾದರೆ, ಒಂದೊಂದು ಪುಸ್ತಕದ ಬೆಲೆಯೂ ಏಳುನೂರ ಐವತ್ತು ರೂಪಾಯಿಗಳಿಗೂ ಮಿಗಿಲಾಗುತ್ತದೆ. ಆದರೆ ನಾನು ಈ ಪುಸ್ತಕಕ್ಕೆ ಇಡಲಿರುವ ಬೆಲೆ ಒಂದೊಂದು ಪ್ರತಿಗೂ ಇನ್ನೂರ ಐವತ್ತು ರೂಪಾಯಿಗಳು (ರೂ. 250/–). ಈ ಬೆಲೆ, ಮೇಲುನೋಟಕ್ಕೆ ತುಂಬ ಹೆಚ್ಚೆಂದು ತೋರಬಹುದಾದರೂ ವಾಸ್ತವವಾಗಿ ಹೆಚ್ಚಲ್ಲವಷ್ಟೆ? ಅಲ್ಲದೆ, 'ಇಂಗ್ಲಿಷ್'ನಲ್ಲಿ ಪೀಠಿಕೆ, ಅನುವಾದಗಳಿರುವ ಮಹಾ ಸುಭಾಷಿತ ಸಂಗ್ರಹವು ವಿಶ್ವದ ಯಾವ ಭಾಗದಲ್ಲಾದರೂ, ಪ್ರಕಾಶಕರು ಅದಕ್ಕೆ ಈಗ ನಿಗದಿಮಾಡಿರುವ ಬೆಲೆಗೇ ಲಕ್ಷಗಟ್ಟಲೆ ಪ್ರತಿಗಳು ಮಾರಾಟವಾಗಿ ಅದು ಹಲವು ಬಾರಿ ಪುನರ್ಮುದ್ರಣವಾಗುವ ಸಾಧ್ಯತೆ ಇದೆ. ಕನ್ನಡದಲ್ಲಿ ಅಚ್ಚಾಗುವ ಪುಸ್ತಕಗಳು, ಅವು ಇನ್ನೆಷ್ಟೇ ಚೆನ್ನಾಗಿರಲಿ, ಅವುಗಳಿಗೆ ಬೆಲೆ ಎಷ್ಟೇ ಕಡಮೆ ಇರಲಿ ಕೇವಲ ಒಂದು ಸಾವಿರ ಪ್ರತಿಗಳು ಮಾರಾಟವಾಗಬೇಕಾದರೂ ಕನಿಷ್ಠಪಕ್ಷ ಎರಡು ದಶಕವಾದರೂ ಬೇಕಾಗುತ್ತದೆ. (ಅದೂ, ಸಮರ್ಥ ಮಾರಾಟಗಾರನಾದರೆ!) ಇನ್ನು ಅವು ಮರು ಮುದ್ರಣವಾಗುವ ಸಾಧ್ಯತೆ ಎಲ್ಲಿ ಬಂತು? ಕನ್ನಡ ಗಾದೆಗಳು 1944ರಲ್ಲಿ ಪ್ರಕಟವಾದ ಒಂದು ನನ್ನ ಪುಸ್ತಕ, ಹದಿನೈದು ವರ್ಷಗಳ ತರುವಾಯ 1959ರಲ್ಲಿ ಎರಡನೆಯ ಬಾರಿಗೆ ಮುದ್ರಣ



ವಾದ ಪುಸ್ತಕ, ಕೇವಲ ಒಂದೂವರೆ ರೂಪಾಯಿಗಳ ಪುಸ್ತಕ, ಈಚೆಗೆ ಇಪ್ಪತ್ತುಮೂರು ವರ್ಷಗಳು ರುಳಿದರೂ ಇನ್ನೂ ಮರುಮುದ್ರಣವನ್ನು ಕಂಡಿಲ್ಲ. ಪ್ರಭಾವಶಾಲಿ ವ್ಯಕ್ತಿಗಳ ಪುಸ್ತಕಗಳು ಹೊರತಾಗಿ ಎಲ್ಲ ಕನ್ನಡ ಪುಸ್ತಕಗಳ ಗತಿಯೂ ಇದೇ ಆಗಿದೆ!

ಈಗ ನಾನು ಪ್ರಕಟಪಡಿಸಲಿರುವ ಪುಸ್ತಕ **ಸಂಸ್ಕೃತ ಲೋಕೋಕ್ತಿಗಳು ಮತ್ತು ಕವಿ ಸೂಕ್ತಿಗಳು** ಕನ್ನಡ ಲಿಪಿಯಲ್ಲಿರುವುದರಿಂದ ಕರ್ಣಾಟಕದಲ್ಲೇ ಮಾರಾಟವಾಗಬೇಕು. ಕರ್ಣಾಟಕದಲ್ಲಿ ಪುಸ್ತಕಗಳನ್ನು ಕೊಂಡು ಓದುವವರ ಸಂಖ್ಯೆ ಏನು? ವಿಶ್ವವಿದ್ಯಾಲಯಗಳ ಪ್ರಕಟಣೆಗಳೇ ಮಾರಾಟವಾಗದೆ ಲಕ್ಷಗಟ್ಟಲೆ ಪ್ರತಿಗಳು ಉಳಿದುಬಿಟ್ಟಿವೆಯಂತೆ. ಆ ಮಾತು ನಿಜವಾದರೆ, ಇನ್ನು ಕನ್ನಡ ಪುಸ್ತಕಗಳು ಹೇಗೆ ಮಾರಾಟವಾಗಬೇಕು?

ಸರ್ಕಾರದವರು ನನ್ನಂಥ ಸಾಹಿತಿಗಳಿಗೆ ನೀಡುತ್ತಿರುವ ನೆರವಿನ ಪ್ರಮಾಣವೇನು? ಅತ್ಯುತ್ತಮ ಗ್ರಂಥಗಳ ರಚನೆ, ಪ್ರಕಟನೆ, ವಿತರಣೆಗಳಿಗೆ ಸರ್ಕಾರ, ಸಾಹಿತ್ಯ ಅಕ್ಯಾಡೆಮಿ, ಮುಂತಾದ ಸಂಸ್ಥೆಗಳು ನೆರವು ನೀಡಲು ತಾವಾಗಿ ಮುಂದಾಗಬೇಡವೆ? ವಿಶ್ವವಿದ್ಯಾಲಯಗಳ ಧನಸಹಾಯ ಆಯೋಗದಿಂದ ಬೃಹತ್‌ಪ್ರಮಾಣದಲ್ಲಿ ನೆರವು ಪಡೆಯುತ್ತಿರುವ ವಿಶ್ವವಿದ್ಯಾಲಯಗಳೂ, ಅಷ್ಟೇ ಪ್ರಮಾಣದಲ್ಲಿ ರಾಜ್ಯ ಸರ್ಕಾರದಿಂದ ಧನಸಹಾಯ ಪಡೆಯುತ್ತಿರುವ ಕನ್ನಡ ಸಾಹಿತ್ಯ ಪರಿಷತ್ತು ಮುಂತಾದ ಸಂಸ್ಥೆಗಳೂ 'ತಮ್ಮ ಪ್ರಕಟಣೆಗಳೇ ಮಾರಾಟವಾಗದೆ ಲಕ್ಷಗಟ್ಟಲೆ ಪ್ರತಿಗಳು ಉಳಿದುಬಿಟ್ಟಿವೆ, ಸದ್ಯಕ್ಕೆ ಹೊಸ ಪುಸ್ತಕಗಳನ್ನು ಪ್ರಕಟಣೆಗೆ ತೆಗೆದುಕೊಳ್ಳುತ್ತಿಲ್ಲ' ಎನ್ನುವಂಥವು ಇಂಥ ಕೆಲಸಗಳಿಗೆ ಸಾಕಷ್ಟು ನೆರವು ನೀಡಲು ಸಾಧ್ಯವೆ? ಉಪ್ಪಿನ ಹೇರಿನೋನು ಅತ್ತ, ಎಣ್ಣೆ ಹೇರಿನೋನು ಅತ್ತ, ತೆಂಗಿನಕಾಯಿನ ಹೇರಿನೋನು ಹೊರಳಿ ಹೊರಳಿ ಅತ್ತ ಎನ್ನುವಂತಾಗಿದೆ ಇಂದಿನ ಸ್ಥಿತಿ!

ಅದಿರಲಿ, ಸಾಲ ಮಾಡಿ, 'ಇದೊಂದು ಸಾಹಿತ್ಯಸೇವೆ' ಎಂದು ಮಾಡಿದರೆ ದೊರೆಯುವ ಅಷ್ಟೈಶ್ವರ್ಯವಾದರೂ ಏನು? **ಗ್ರಂಥಸ್ಥ ಗಾದೆಗಳು** ಗ್ರಂಥವನ್ನು ಭಾರತ ರಾಷ್ಟ್ರೀಯ ಪುಸ್ತಕ ಸಂಸ್ಥೆಯವರು, 1970ರಲ್ಲಿ, 'ಭಾರತದಲ್ಲಿ ಆ ವರ್ಷ ಪ್ರಕಟವಾದ ಹತ್ತು ಶ್ರೇಷ್ಠ ಗ್ರಂಥಗಳಲ್ಲಿ ಒಂದು' ಎಂದು ಪ್ರಸಿದ್ಧಪಡಿಸಿದರು. ರಾಜ್ಯ ಸಾಹಿತ್ಯ ಅಕ್ಯಾಡೆಮಿಯು ಅದಕ್ಕೆ ಒಂದು ಸಾವಿರ ರೂಪಾಯಿಗಳ (ರೂ. 1000/–) ಪ್ರಥಮ ಬಹುಮಾನವನ್ನಿತ್ತು ಪುರಸ್ಕರಿಸಿತು. ಆದರೇನು......? ಆ ಪುಸ್ತಕ ಪ್ರಕಟವಾಗಿ ಇಂದಿಗೆ ಹದಿಮೂರು ವರ್ಷಗಳಿಗೆ ಬಂದರೂ, ಇನ್ನೂ ಮಾರಾಟವಾಗದೆ ಉಳಿದಿರುವ, ಮನೆಯ ಬಹುಭಾಗವನ್ನು ತುಂಬಿಕೊಂಡಿರುವ, ಸುಮಾರು 1000 ಪುಸ್ತಕಗಳನ್ನು ಧೂಳು ತುಂಬಿಕೊಳ್ಳದಂತೆ, ಗೆದ್ದಲು ತಿನ್ನದಂತೆ ನೋಡಿಕೊಳ್ಳಬೇಕಾದ 'ಪುಸ್ತಕ ಸೇವೆ'ಯಷ್ಟೆ!

ಇತ್ತೀಚೆಗೆ ರಾಜ್ಯ ಸರ್ಕಾರದವರು 'ಆರ್ಥಿಕ ದುಃಸ್ಥಿತಿಯಲ್ಲಿರುವ ಕಲಾವಿದರಿಗೆ ಸಹಾಯ' ಎಂಬ ಹೆಸರಿನ ಯೋಜನೆಯಲ್ಲಿ ನನಗೆ ಮಾಹೆಯಾನ ಒಂದು ನೂರು ರೂಪಾಯಿಗಳನ್ನು (ರೂ. 100) ಕೊಡುವಂತೆ ಕೃಪೆಯಿಟ್ಟು ಮಂಜೂರು ಮಾಡಿರುತ್ತಾರೆ—ಅವರ ಈ ಔದಾರ್ಯಕ್ಕಾಗಿ ನಾನು ತುಂಬ ಕೃತಜ್ಞನಾಗಿದ್ದೇನೆ—ಅಷ್ಟನ್ನು ಬಿಟ್ಟರೆ ಬೇರೆ ಇನ್ನೇನೂ ಇಲ್ಲ. ಈ ಮಾತನ್ನು ನಾನು ಯಾರೊಡನೆಯಾದರೂ ಹೇಳಿದರೆ, ಅವರು ಹೇಳುವುದಿಷ್ಟೆ!: "ಅಷ್ಟು ಕಂಡಿರ ಅನಂತ ಭಟ್ಟರೆ ಎಂದರೆ, ಮುಪ್ಪಿನ ಕಾಲಕ್ಕೆ ಮೂರೇ ಹೆಂಡಿರು ಅಂದ್ರಂತೆ!' ನಿಮಗೆ ಅಷ್ಟಾದರೂ ಬರುತ್ತಿದೆ...... ಏನೂ ಇಲ್ಲದ ಸಾಹಿತಿಗಳು ಎಷ್ಟು ಮಂದಿ ಇಲ್ಲ?"

ಗಿರಿ ಹತ್ತಿ ವರ ಬೇಡಿದುದರ ಫಲವಾಗಿ, ಪುಸ್ತಕ ಅಚ್ಚಾಗಲಿಲ್ಲವಲ್ಲ ಎಂಬ ಚಿಂತೆ ದೂರವಾಯಿತು. **ಗ್ರಂಥಸ್ಥ ಗಾದೆಗಳು** ಪುಸ್ತಕ ಅಚ್ಚಾಯಿತು. ಆದರೆ ಅಚ್ಚಾದ ಪುಸ್ತಕಗಳು ಮಾರಾಟವಾಗದೆ ಉಳಿದುಬಿಟ್ಟಿವೆಯಲ್ಲ ಎಂಬ ಚಿಂತೆ ಒಮ್ಮೊಮ್ಮೆಯಾದರೂ ತಲೆಹಾಕುತ್ತದೆ. ಇದರ ಜತೆಗೆ ಗಿರಿ ಹತ್ತಿದುದರ ಆಯಾಸ ಬೇರೆ!

ಹೀಗಾದರೆ, ನನ್ನಂತೆ ಸಂಕಷ್ಟದಲ್ಲಿರುವ ಸಾಹಿತಿಗಳಾದವರು ಏನು ಮಾಡಬೇಕು? ತಲೆಯ ಮೇಲೆ ಕೈಹೊತ್ತು ಕುಳಿತರೆ ಸಾಹಿತ್ಯಸೇವೆ ಮುಂದುವರಿದೀತೆ? ಇದು ನನ್ನ ಒಬ್ಬನಿಗೆ ಮಾತ್ರ ಸಂಬಂಧಪಟ್ಟ ವಿಷಯವಲ್ಲ. ಇದು, ಕನ್ನಡ ಬಂಧುಗಳು, ಭಾಷಾಭಿಮಾನಿಗಳು, ಸಂಸ್ಕೃತಿ ಸಂವರ್ಧ

ಕರು ಗಂಭೀರವಾಗಿ ಯೋಚಿಸಬೇಕಾದ ವಿಚಾರ. ಘನ ಸರ್ಕಾರದವರ ಉದಾರ ಗಮನಕ್ಕೆ ಶೀಘ್ರ ವಾಗಿ ತರಬೇಕಾದ ವಿಚಾರ.

ಇಳಿವಯಸ್ಸಿನಲ್ಲಿ ಬೃಹತ್ ಪ್ರಯತ್ನಗಳಲ್ಲಿ ತೊಡಗಿರುವ ಉತ್ಸಾಹೀ ಸಾಹಿತಿಗಳನ್ನು ಗುರುತಿಸಿ, ಅಂಥವರಿಗಾದರೂ ವಿಶ್ವವಿದ್ಯಾನಿಲಯಗಳಿಂದಲೋ, ಸಾಹಿತ್ಯ ಅಕ್ಶಾಡೆಮಿಯಂಥ ಸಾಂಸ್ಕೃತಿಕ ಸಂಸ್ಥೆಗಳಿಂದಲೋ ಅಥವಾ ಅವು ಯಾವುದರಿಂದಲೂ ಆಗದಿದ್ದರೆ ಕಡೆಗೆ ಸರ್ಕಾರದಿಂದಲಾದರೂ ಆದಷ್ಟು ಹೆಚ್ಚು ಸಹಾಯವನ್ನು ಅತಿ ಶೀಘ್ರವಾಗಿ ದೊರಕಿಸಿಕೊಟ್ಟು ಅವರು ಕೈಗೊಂಡಿರುವ ಕಾರ್ಯಗಳು ನಿರ್ವಿಘ್ನವಾಗಿ ನಡೆಯುವಂತೆ ನೋಡಿಕೊಳ್ಳುವುದು ಮಹಾಜನರ ಕರ್ತವ್ಯ. ಮಾರಾಟಕ್ಕಿರುವ ಉತ್ತಮ ಪುಸ್ತಕಗಳು ಯಾವ ಲೇಖಕ/ಲೇಖಕಿಯರದೇ ಆಗಿರಲಿ, ಅವು ಯಾವ ವರ್ಷವೇ ಪ್ರಕಟವಾಗಿರಲಿ, ಅವನ್ನು ಯಾವ ಪ್ರತಿಫಲವನ್ನೂ ನಿರೀಕ್ಷಿಸದೆ, ಹುಳುಹುಪ್ಪಟೆಗಳು ತಿಂದು ಹಾಳು ಮಾಡುವುದಕ್ಕೆ ಮೊದಲೇ ಉದಾರ ಮನಸ್ಸಿನಿಂದ ಕೊಂಡು ಪ್ರೋತ್ಸಾಹ ಕೊಡಬೇಕಾದುದು ಸಾಂಸ್ಕೃತಿಕ ಸಂಸ್ಥೆಗಳೆಲ್ಲದರ ಕರ್ತವ್ಯ, ಮುಖ್ಯವಾಗಿ ಸರ್ಕಾರದ ಕರ್ತವ್ಯ. ರಾಜ್ಯ ಗ್ರಂಥಾಲಯ ಇಲಾಖೆ, ಪ್ರಕಟವಾದ ಪುಸ್ತಕಗಳನ್ನು ಒಟ್ಟಾಗಿ ಕೊಳ್ಳುವಾಗ ಆಯಾ ವರ್ಷ ಪ್ರಕಟವಾದ ಪುಸ್ತಕಗಳನ್ನು ಅಥವಾ ಇಂಥ ವರ್ಷದಿಂದ ಈಚೆಗೆ ಪ್ರಕಟವಾದ ಪುಸ್ತಕಗಳನ್ನು ಮಾತ್ರವೇ ಕೊಂಡುಕೊಳ್ಳುವುದು, ಮಿಕ್ಕವನ್ನಲ್ಲ ಎಂಬ ಕಟ್ಟುನಿಟ್ಟಿನ ನಿಯಮವನ್ನು ಮಾಡಿಕೊಂಡಿರುವುದರಿಂದ ಇಲ್ಲಿ ಈ ಮಾತನ್ನು ಹೇಳಬೇಕಾಗಿದೆ. ಅತ್ಯುತ್ತಮ ಪುಸ್ತಕಗಳ ಮಟ್ಟಿಗಾದರೂ ಆ ನಿಯಮವನ್ನು ಸ್ವಲ್ಪ ಸಡಿಲಿಸಿದರೆ ಅನೇಕರಿಗೆ ಉಪಕಾರವಾಗುತ್ತದೆ. ಗ್ರಂಥಭಂಡಾರಗಳಿಗೂ ಒಳ್ಳೆಯ ಪುಸ್ತಕಗಳು ಸೇರ್ಪಡೆಯಾಗುತ್ತವೆ. ಅವಕ್ಕೆ. ತೋಟ ಶೃಂಗಾರ ಒಳಗೆ ಗೋಣೀಸೊಪ್ಪು ಎಂಬ ಅಪಖ್ಯಾತಿ ತಪ್ಪುತ್ತದೆ.

'ಅದ್ಭುತ ಶ್ರಮದ ಸಾರ್ಥಕ ಗ್ರಂಥ', 'ಮಹಾ ತಪಸ್ಸಿನ ಫಲ' ಇತ್ಯಾದಿಯಾಗಿ ಪತ್ರಿಕೆಗಳು ಕೊಂಡಾಡಿರುವ ಗ್ರಂಥಸ್ಥ ಗಾದೆಗಳು ಪುಸ್ತಕವನ್ನು ರಾಜ್ಯ ಗ್ರಂಥಾಲಯ ಪ್ರಾಧಿಕಾರ, ಅದು ಪ್ರಕಟವಾದಂದಿನಿಂದ ಇಂದಿನ ವರೆಗೂ ಒಟ್ಟಾಗಿ ಕೊಂಡು ಪ್ರೋತ್ಸಾಹಿಸಿಲ್ಲ. ಇದನ್ನು ನಾನು ಒಂದು ಕಾಲದಲ್ಲಿ ಯಾರೊಡನೆಯಾದರೂ ಹೇಳಿದರೆ ಅವರು, 'ಅದೇಕೆ, ನಿಮಗೆ ತಿಳಿಯದೆ? ಮುಂಗೈ ಆಡಿದರೆ ಮೊಳಕೈ ಆಡುತ್ತದೆ' ಎನ್ನುತ್ತಿದ್ದರು. ಮುಂಗೈಗೆ ಶಕ್ತಿಯಿದ್ದರೆ, ಅದನ್ನು ಆಡಿಸುವವರಿಗೆ ಆ ಮನಸ್ಸಿದ್ದರೆ, ಅದು ಆಡುತ್ತದೆ. ಇಲ್ಲದಿದ್ದರೆ ಇಲ್ಲ ಎಂದು ಕೊಂಡು ನಾನು ಸುಮ್ಮನಾಗುತ್ತಿದ್ದೆ.

ಅದಕ್ಕಾಗಿ, ಕನ್ನಡ ಬಂಧುಗಳಲ್ಲಿ ನನ್ನದೊಂದು ವಿನಮ್ರ ಮನವಿ. ಈಗ ನಾನು ಕೈಗೊಂಡಿರುವ ಕಾರ್ಯವು ಕೈಗೂಡುವಂತೆ ಮಾಡಲು **ಗ್ರಂಥಸ್ಥ ಗಾದೆಗಳು, ಶಬ್ದಕೋಶ** ಎಂಬ ಪುಸ್ತಕಗಳನ್ನು ಸರ್ಕಾರ ಮತ್ತಿತರ ಸಂಸ್ಥೆಗಳು ಕೊಳ್ಳಲಿ ಬಿಡಲಿ, ಮಹಾಜನರು ಶೀಘ್ರವಾಗಿ ತಾವೇ ಒಂದೊಂದು ಪ್ರತಿಯನ್ನು ಕೊಂಡು, ತಮ್ಮ ಬಂಧುಮಿತ್ರರಿಗೂ ಒಂದೊಂದು ಪ್ರತಿಯನ್ನು ಕೊಂಡುಕೊಳ್ಳುವಂತೆ ಪ್ರೇರಿಸಿ, ಮುಂದೆ ಪ್ರಕಟವಾಗಲಿರುವ **ಸಂಸ್ಕೃತ ಲೋಕೋಕ್ತಿಗಳು ಮತ್ತು ಕವಿ ಸೂಕ್ತಿಗಳು** ಪುಸ್ತಕದ ಪ್ರತಿಗಳನ್ನು ಪ್ರಕಟಣಪೂರ್ವ ಬೆಲೆ—ಒಂದು ಪ್ರತಿಗೆ ಇನ್ನೂರು ರೂಪಾಯಿಗಳು(ರೂ. 200/-) ನವೆಂಬರ್ 10 ಅಷ್ಟರ ಒಳಗಾಗಿ ಕೊಟ್ಟು ತಮ್ಮ ಪ್ರತಿಗಳನ್ನು ಕಾಯ್ದಿರಿಸಿಕೊಳ್ಳುವುದು ಮತ್ತು ಪುಸ್ತಕ ಪ್ರಕಟವಾದ ತರುವಾಯ ಮಾರಾಟಕ್ಕೆ ಇನ್ನೂ ಪ್ರತಿಗಳು ಉಳಿದಿದ್ದಲ್ಲಿ ಆಗ ಅದರ ಮುಖಬೆಲೆಗೇ ಕೊಂಡುಕೊಳ್ಳುವುದು. ಒಬ್ಬ ಮನುಷ್ಯನ ಇಡೀ ಜೀವನದಲ್ಲಿ ಒಂದು ಸಾರ್ಥಕವಾದ ಗ್ರಂಥಕ್ಕೆ ಐವತ್ತೊ, ನೂರೊ, ಇನ್ನೂರೈವತ್ತೋ ರೂಪಾಯಿಗಳನ್ನು ಕೊಟ್ಟು ಕೊಂಡುಕೊಳ್ಳುವುದು ಕೆಲವರಿಗಾದರೂ ಸಾಧ್ಯ. ಅಂಥವರಿಗೆ ಇದು ಇರುವೆಯ ಗೂಡಿಗೆ ಎರಡು ಸಕ್ಕರೆಯ ಹರಳು ಉದುರಿಸಿದ ಹಾಗೆ.

ಬಹುಶಃ ಪ್ರಸ್ತುತ ಮುದ್ರಣದ ಪುಸ್ತಕಗಳಂತೂ ಮುಂಗಡವಾಗಿ ಹಣವನ್ನು ಕೊಡುವವರಿಗಲ್ಲದೆ ಇತರರಿಗೆ ದೊರೆಯಲಾರದು. ಆದರೆ, ಎರಡನೆಯ ಮುದ್ರಣದ ಪ್ರತಿಗಳನ್ನು—ಪುಸ್ತಕಕ್ಕೆ ಮರುಮುದ್ರಣ ಯೋಗವಿದ್ದರೆ—ಹೆಚ್ಚು ಜನರಿಗೆ, ಹೆಚ್ಚು ಗ್ರಂಥಾಲಯಗಳಿಗೆ ಕಡಮೆ ಬೆಲೆಗಲ್ಲದಿದ್ದರೆ ಈಗ ಇಟ್ಟಿರುವ ಬೆಲೆಗಾದರೂ ದೊರೆಯುವಂತೆ ಮಾಡಬಹುದು. ಅದು ಸುಸಂಸ್ಕೃತ ಜನರ ಮತ್ತು ಘನ ಸರ್ಕಾರ ಮತ್ತು ಇತರ ಸಂಸ್ಥೆಗಳ ಔದಾರ್ಯವನ್ನು ಅವಲಂಬಿಸಿದೆ.

ಒಂದುವೇಳೆ ಸರ್ಕಾರವು ಗಜವು ಕಣ್ಣುಮುಚ್ಚಿದಂತೆ ಕಣ್ಣುಮುಚ್ಚಿ ಕುಳಿತರೂ ಕರುಣಾಳುಗಳೂ ಉದಾರಿಗಳೂ ಆದ ಕನ್ನಡ ಬಂಧುಗಳು ಖಂಡಿತವಾಗಿಯೂ ಹಾಗೆ ಮಾಡಲಾರರೆಂಬ ಭರವಸೆಯಿಂದ ಈ ವಿನಮ್ರ ಮನವಿಯನ್ನು ತಮ್ಮೆಲ್ಲರ ಮುಂದಿಟ್ಟಿದ್ದೇನೆ.

ಶಿವಮಸ್ತು ಸರ್ವಜಗತಾಂ ಪರಹಿತನಿರತಾ ಭವಂತು ಭೂತಗಣಾಃ ।
ದೋಷಾಃ ಪ್ರಯಾಂತು ಶಾಂತಿಂ ಸರ್ವತ್ರ ಸುಖೀ ಭವತು ಲೋಕಃ ॥

ಶ್ರೀಹರ್ಷ: ನಾಗಾನಂದ

ಎಲ್ಲ ಲೋಕಗಳಿಗೂ ಶುಭವಾಗಲಿ. ಎಲ್ಲ ಪ್ರಾಣಿಗಳೂ ಪರಹಿತ ನಿರತರಾಗಲಿ. ದೋಷಗಳು ಶಮನವಾಗಲಿ. ಜನರು ಸರ್ವತ್ರ ಸುಖಿಗಳಾಗಲಿ.

ತಮ್ಮ ವಿಶ್ವಾಸಿ,

ಎಚ್. ಎಸ್. ಅಚ್ಚಪ್ಪ.

# ಮನವಿ - ೧

ದಿನಾಂಕ: ೨೬-೧-೧೯೭೮

ಸನ್ಮಾನ್ಯರೆ,

ಸಂಸ್ಕೃತ ಲೋಕೋಕ್ತಿಗಳು ಹಾಗೂ ಕವಿಸೂಕ್ತಿಗಳು (ಕನ್ನಡ ಲಿಪಿಯಲ್ಲಿ ತಾತ್ಪರ್ಯ ಸಹಿತ)—ಪುಸ್ತಕದ ಪ್ರಕಟಣೆಗಾಗಿ ಕರ್ನಾಟಕ ರಾಜ್ಯ ಸರ್ಕಾರದವರು ನನಗೆ ೫೦೦೦ ರೂಪಾಯಿಗಳನ್ನು—ಪ್ರಕಾಶನಪೂರ್ವ ಬೆಲೆ ಪ್ರತಿ ಒಂದಕ್ಕೆ ೧೦೦ ರೂಪಾಯಿಗಳಂತೆ ೫೦ ಪ್ರತಿಗಳ ಬೆಲೆ—ಮುಂಗಡವಾಗಿ ಕೊಟ್ಟಿರುತ್ತಾರೆ.

ಒಳ್ಳೆಯ ಮುದ್ರಣಾಲಯವೊಂದರಲ್ಲಿ ೧೦೦೦ ಪುಟಗಳುಳ್ಳ ಮೇಲ್ಕಂಡ ಪುಸ್ತಕವನ್ನು ಮುದ್ರಿಸಲು ಇಂದಿನ ದಿನಗಳಲ್ಲಿ ೧೦೦೦ ಪ್ರತಿಗಳಿಗೆ ಮುದ್ರಣ ವೆಚ್ಚವೇ ೪೦,೦೦೦ ರೂಪಾಯಿಗಳು ಆಗುತ್ತದೆ. ಅಲ್ಲದೆ, ಮುದ್ರಣಾಲಯಗಳಿಗೆ ವಿದ್ಯುಚ್ಛಕ್ತಿಯ ಪೂರೈಕೆಯು ಶೇ. ೫೦ರಷ್ಟು ಕಡಿತ ವಾಗಿರುವುದರಿಂದ ಪುಸ್ತಕವು ಮುದ್ರಣವಾಗಿ ಹೊರಬರಲು ಕನಿಷ್ಠಪಕ್ಷ ೧ ವರ್ಷವೇ ಬೇಕಾಗುತ್ತದೆ; (ಅದೂ ಸಮರ್ಥ ಮುದ್ರಣಾಲಯವಾದರೆ) !

ಯಾವ ಮುದ್ರಣಾಲಯವಾದರೂ ಮುದ್ರಣ ವೆಚ್ಚದ ಅರ್ಧದಷ್ಟನ್ನು (ಶೇ. ೫೦) ಮುಂಗಡ ವಾಗಿ ಕೊಟ್ಟಲ್ಲದೆ ಕೆಲಸವನ್ನು ಕೈಗೆತ್ತಿಕೊಳ್ಳುವುದಿಲ್ಲ. ಕಡೆಯ ಪಕ್ಷ ೫೦೦ ಪ್ರತಿಗಳನ್ನಾದರೂ ಮುದ್ರಿಸೋಣವೆಂದರೂ, ಮುದ್ರಣಾಲಯಕ್ಕೆ ೧೦,೦೦೦ ರೂಪಾಯಿಗಳನ್ನು ಮುಂಗಡವಾಗಿ ಕೊಡಬೇಕು.

ಹೀಗಾಗಿ, ಸರ್ಕಾರದವರು ಈಗ ನೀಡಿರುವ ಮೊಬಲಗು ಸ್ವಲ್ಪವೂ ಸಾಲದಾಗಿದೆ.

ಕೇಂದ್ರ ಸರ್ಕಾರದವರು ಪುಸ್ತಕವೆಲ್ಲ ಮುದ್ರಣವಾದಮೇಲೆ ಮುದ್ರಿತ ಪ್ರತಿಯೊಂದನ್ನು ಅವರಿಗೆ ಮುದ್ರಣ ವೆಚ್ಚದ ಬಿಲ್ ಸಂಗಡ ಕಳುಹಿಸಿ ಕೊಟ್ಟಲ್ಲಿ ಮುದ್ರಣವೆಚ್ಚದಲ್ಲಿ ಅರ್ಧದಷ್ಟನ್ನು (ಶೇ. ೫೦)—ಇಲಾಖೆಯವರು ಪರಿಶೀಲಿಸಿ ಅವರ ಲೆಕ್ಕಾಚಾರದಂತೆ—ಕೊಡುವುದಾಗಿ ತಿಳಿಸಿದ್ದಾರೆ ಆದರೆ ಅವರು ಹಾಕಿರುವ ಷರತ್ತುಗಳು ಸುವರ್ಣ ಸಂಕೋಲೆಗಳೇ ಆಗಿವೆ. ಆ ನಿಯಮಗಳಿಗೆ ಒಪ್ಪಿ ಕೊಂಡಿದ್ದೇ ಆದರೆ, ಔದಾರ್ಯದ ಉರುಳಿನಲ್ಲಿ ತೊಡರಿಬೀಳಬೇಕಾಗುತ್ತದೆ.

ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಸಾಕಷ್ಟು ಹಣವನ್ನು ಸಾಲವಾಗಿ ತೆಗೆದುಕೊಳ್ಳೋಣ, ವೆಂದರೆ, ಅವರು ಆಧಾರ ರಹಿತ ಸಾಲವನ್ನು ಮಂಜೂರು ಮಾಡುವುದಿಲ್ಲವೆನ್ನುತ್ತಾರೆ. ಅಲ್ಲದೆ, ಅವರು ಹಾಕುವ ಧರ್ಮದ ಬಡ್ಡಿಯೂ ಕಡಮೆಯೇನಲ್ಲ. "ಸಾಲ ಮಾಡಿ ಓಲೆ ಮಾಡಿಸಿ, ಓಲೆ ಮಾರಿ ಬಡ್ಡಿಗೆ ಕೊಟ್ಟಂತಾಗುತ್ತದೆ."

ಹೀಗಾಗಿ, ಮುದ್ರಣ ಕಾರ್ಯವು ಪ್ರಾರಂಭವಾಗದೆ ನಿಂತುಬಿಟ್ಟಿದೆ.

ಒಮ್ಮೆ, ರಾಜ್ಯ ಸರ್ಕಾರದಿಂದಲೂ, ಮಿತ್ರರೂ ಹಾಗೂ ಅಭಿಮಾನಿಗಳಿಂದಲೂ ಪಡೆದು ಕೊಂಡಿರುವ ಸಹಾಯವನ್ನು ಹಿಂತಿರುಗಿಸಿ ಈ ಕೆಲಸವನ್ನು—ಪುಸ್ತಕ ಮುದ್ರಣ ಹಾಗೂ ಪ್ರಕಟಣ ಕಾರ್ಯ—ಇಲ್ಲಿಗೇ ನಿಲ್ಲಿಸಿಬಿಡೋಣವೆನ್ನಿಸಿತು. ಅಷ್ಟರಲ್ಲಿಯೇ ಕಥಾಸರಿತ್ಸಾಗರದ "ತತ್‌ಕ್ಷಣೇನ ನ ಕಿಂ ಕುರ್ಯಾತ್ ಪ್ರಸನ್ನಃ ಪರಮೇಶ್ವರಃ" (ದೇವರು ಸಂತೋಷಗೊಂಡರೆ, ತತ್‌ಕ್ಷಣವೇ ಏನನ್ನು ಬೇಕಾದರೂ ಮಾಡಬಲ್ಲ) ಎಂಬ ಅಮೃತವಾಣಿಯೊಂದು ನೆನಪಾಯಿತು. ಮಾಡಬಹುದಾದ ಪ್ರಯತ್ನವನ್ನೆಲ್ಲ ಮಾಡಿಬಿಡೋಣ ಎಂದು ಇದೂ ಒಂದು ಪ್ರಯತ್ನವನ್ನು ಮಾಡಿರುತ್ತೇನೆ. ನನ್ನ ಪ್ರಯತ್ನವಾದರೂ ಏನು? ನನ್ನ ಮನೆದೇವರು ಶ್ರೀ ಲಕ್ಷ್ಮೀಜನಾರ್ದನಸ್ವಾಮಿಯನ್ನು "ಕರುಣಾಳು ಬಾ ಬೆಳಕೆ ಮುಸುಕಿದೀ ಮಬ್ಬಿನಲಿ ಕೈಹಿಡಿದು ನಡೆಸೆನ್ನನು" ಎಂದು ಪ್ರಾರ್ಥಿಸುವುದು. ಮತ್ತು ಜನತಾ ಜನಾರ್ದನರಾದ ನಾಡ ಬಾಂಧವರನ್ನು ಹೀಗೆ ಪ್ರಾರ್ಥಿಸಿಕೊಳ್ಳುವುದು:—

1. ಸಂಸ್ಕೃತಿ ಮತ್ತು ಕನ್ನಡ ಅಭಿವೃದ್ಧಿ ಇಲಾಖೆಯ ನಿರ್ದೇಶಕರು ಸಂಸ್ಕೃತ ಲೋಕೋಕ್ತಿಗಳು ಹಾಗೂ ಕವಿಸೂಕ್ತಿಗಳು ಪುಸ್ತಕದ ಪ್ರಕಟಣೆಗೆ ಇನ್ನೂ ೫೦ ಪ್ರತಿಗಳಿಗೆ ಮುನ್ನಿನಂತೆಯೇ ಸಹಾಯಧನವನ್ನು ಮುಂಗಡವಾಗಿ ಕೊಡಬೇಕೆಂದೂ

2. ಪಠ್ಯಪುಸ್ತಕ ಇಲಾಖೆಯ ನಿರ್ದೇಶಕರು ಮತ್ತು ಗ್ರಂಥಾಲಯ ಇಲಾಖೆಯ ಮುಖ್ಯಾಧಿಕಾರಿಗಳು ಒಬ್ಬೊಬ್ಬರೂ ತಮ್ಮ ಅಧಿಕಾರ ವ್ಯಾಪ್ತಿಯಲ್ಲಿರುವ ಪುಸ್ತಕ ಭಂಡಾರಗಳಿಗಾಗಿ ಗ್ರಂಥಸ್ಥ ಗಾದೆಗಳು ಪುಸ್ತಕದ ಪ್ರತಿಗಳನ್ನು ಕಡೆಯ ಪಕ್ಷ ೧೦೦ ಪ್ರತಿಗಳನ್ನಾದರೂ ಕೊಂಡುಕೊಳ್ಳಬೇಕೆಂದೂ.

3. ಮಿತ್ರರೂ ಅಭಿಮಾನಿಗಳೂ ಗ್ರಂಥಸ್ಥ ಗಾದೆಗಳು ಪುಸ್ತಕವನ್ನು ಕೊಂಡುಕೊಂಡು ಈಗ ಮುದ್ರಣವಾಗಬೇಕಾಗಿರುವ ಪುಸ್ತಕಕ್ಕೆ ಪ್ರಕಾಶನಪೂರ್ವ ಬೆಲೆಯನ್ನು—ಪ್ರತಿ ಒಂದಕ್ಕೆ ೧೦೦ ರೂಪಾಯಿಗಳಂತೆ—ತಮಗೆ ಎಷ್ಟು ಪ್ರತಿಗಳು ಬೇಕೋ ಅಷ್ಟಕ್ಕೆ ೧೦-೩-೭೮ರ ಒಳಗಾಗಿ ಕಳುಹಿಸಿ ಉಪಕರಿಸಬೇಕೆಂದೂ, ತಮ್ಮೆಲ್ಲರನ್ನು ಕೇಳಿಕೊಳ್ಳುತ್ತೇನೆ.

ಎಚ್. ಎಸ್. ಅಚ್ಚಪ್ಪ

# ಮನವಿ – ೨

ದಿನಾಂಕ: ೬–೧೦–೧೯೭೫

ಸನ್ಮಾನ್ಯರೇ,

ತಮಗೆ ನಾನೇನೂ ಅಪರಿಚಿತನಲ್ಲ. ಈ ಮೊದಲೇ ಸರ್ವಶ್ರೀ ಸಾ. ಕಸ್ತೂರಿ, ಜಿ. ಪಿ. ರಾಜರತ್ನಂ, ದೇಜಗೌ, ನಿರಂಜನ ಮೊದಲಾದ ಹಲವರು ಹಿರಿಯರು ತಮಗೆ ನನ್ನ ಪರಿಚಯ ಮಾಡಿ ಕೊಟ್ಟಿದ್ದಾರೆ. ಗಿರಿ ಹತ್ತಿ ವರ ಬೇಡುತ್ತಿರುವವನು ನಾನು. ಬೆಂಗಾವಲಾಗಿ ನಿಂತು ಬೆನ್ನು ತಟ್ಟಿ ಜಾರದಂತೆ ಮುನ್ನಡೆಸಿ ಮೇಲಕ್ಕೆ ತಂದಿರುವವರು ತಾವು. ತಮಗೆ ನನ್ನ ಕೃತಜ್ಞತಾಪೂರ್ವಕ ನಮಸ್ಕಾರಗಳು.

ತಾವು ಬಲ್ಲಂತೆ, ನಾನು ಕಾಲು ಶತಮಾನಕ್ಕೂ ಮೀರಿ ದುಡಿದು **ಕನ್ನಡ ಗಾದೆಗಳು**, **THE WAY TO SUCCESS AND HAPPINESS**, ಗ್ರಂಥಸ್ಥ ಗಾದೆಗಳು ಶಬ್ದ ಕೋಶ—ಈ ನಾಲ್ಕು ಪುಸ್ತಕಗಳನ್ನು ಸಂಪಾದಿಸಿ ಯತ್ಕಿಂಚಿತ್ ಸೇವೆಯನ್ನು ನಾಡಿಗೆ ಸಲ್ಲಿಸಿದ್ದೇನೆ. ತಾವು ಈ ಪುಸ್ತಕಗಳನ್ನು ಆದರದಿಂದ ಕೈಗೆತ್ತಿಕೊಂಡು ನನ್ನ ಸೇವೆಗೆ ಮಿಗಿಲಾದ ಪ್ರೋತ್ಸಾಹವನ್ನಿತ್ತಿದ್ದೀರಿ. ನವದೆಹಲಿಯ ರಾಷ್ಟ್ರೀಯ ಪುಸ್ತಕ ಸಂಸ್ಥೆಯವರು ಗ್ರಂಥಸ್ಥ ಗಾದೆಗಳನ್ನು ಭಾರತದಲ್ಲಿ ೭೦–೭೧ ನೆಯ ಸಾಲಿನಲ್ಲಿ ಪ್ರಕಟವಾದ ಕನ್ನಡದ ಹತ್ತು ಶ್ರೇಷ್ಠ ಗ್ರಂಥಗಳಲ್ಲಿ ಒಂದೆಂದು ಪರಿಗಣಿಸಲೂ, ಅದೇ ವರ್ಷ ರಾಜ್ಯ ಸಾಹಿತ್ಯ ಅಕ್ಯಾಡಮಿಯವರು ಅದೇ ಗ್ರಂಥಕ್ಕೆ ಪ್ರಥಮ ಬಹುಮಾನವನ್ನಿತ್ತು ಪುರಸ್ಕರಿಸಲೂ ತಮ್ಮ ಸೌಜನ್ಯ ಸಹಾನುಭೂತಿಗಳೇ ಕಾರಣ. ದೇವರ ದಯೆಯಿಂದ ಉತ್ತೇಜನದ ಈ ಪರಮ ಭಾಗ್ಯ ನಾನಾ ದೆಸೆಯಿಂದ ನನ್ನ ಪಾಲಿಗೆ ಒದಗಿಬರದಿದ್ದಿದ್ದರೆ ಇಂಥ ಕೆಲಸ ನನ್ನಿಂದ ಸಾಧ್ಯವಾಗುತ್ತಿರಲಿಲ್ಲವೆಂಬ ಅಂಶವನ್ನು ವಿನಯದಿಂದ, ತುಂಬಿಬಂದ ಹೃದಯದಿಂದ ಅರಿಕೆಮಾಡಲು ಆಶಿಸುತ್ತೇನೆ.

ನಾಡಿನ ಜನತೆ ನನ್ನ ಬೆನ್ನ ಹಿಂದೆ ನಿಂತಿರುವುದೆಂಬ ದೃಢ ನೆಚ್ಚುಗೆಯಿಂದ ಈಗ ಇನ್ನೊಂದು ಬೃಹತ್ ಗ್ರಂಥದ ಪ್ರಕಟಣೆಗೆ ಕೈ ಹಾಕಿದ್ದೇನೆ. ಅದೆಂದರೆ, ಸಂಸ್ಕೃತ ಭಾಷೆಯಲ್ಲಿನ ಅತ್ಯುತ್ತಮ ಲೋಕೋಕ್ತಿಗಳನ್ನೂ ಕವಿಸೂಕ್ತಿಗಳನ್ನೂ ಸುಭಾಷಿತಗಳನ್ನೂ ಆಯ್ದು ಅಕ್ಷರಮಾಲಿಕೆಯ ಅನುಕ್ರಮದಲ್ಲಿ ಕೂಡಿಸಿ ಅಚ್ಚಿಗೆ ಸಿದ್ಧಗೊಳಿಸಿದ್ದೇನೆ. ಗ್ರಂಥ, ರೂಪುಗೊಳ್ಳುತ್ತಿದ್ದ ಒಂದೊಂದು ಹಂತದಲ್ಲಿಯೂ ಉಭಯ ಸರಕಾರಗಳೂ, ನನ್ನ ನಾಡಬಾಂಧವರೂ ಇದಕ್ಕೂ ಮುನ್ನಿನಂತೆಯೇ ಮಿಗಿಲಾದ ಆಶ್ರಯವನ್ನು ಇತ್ತಾರೆಂದು ನೆನೆದು ಹರ್ಷಗೊಂಡಿದ್ದೇನೆ.

ಇದೀಗ ಪ್ರಕಟಿಸಬೇಕೆಂದಿರುವ ಸಂಸ್ಕೃತ ಲೋಕೋಕ್ತಿಗಳು ಹಾಗೂ ಕವಿಸೂಕ್ತಿಗಳು ಸುಮಾರು ೧೦೦೦ ಪುಟಗಳ ಪುಸ್ತಕ. ಈ ಬೃಹತ್ ಸಂಕಲನ ಗ್ರಂಥಸ್ಥ ಗಾದೆಗಳಷ್ಟೇ ಮಹತ್ವಪೂರ್ಣವಾದದ್ದು. ಸಂಸ್ಕೃತದ ಸೂಕ್ತಿಗಳನ್ನು ಕನ್ನಡ ಲಿಪಿಯಲ್ಲಿ ಬರೆದು ಅವುಗಳಿಗೆ ಕನ್ನಡದಲ್ಲಿ ಭಾವಾನುವಾದಗಳನ್ನು ಕೊಟ್ಟಿರುವುದು ಈ ಹೊತ್ತಗೆಯ ವೈಶಿಷ್ಟ್ಯ. ಕನ್ನಡ ಮತ್ತು ಸಂಸ್ಕೃತಗಳ ಉಭಯ ಭಾಷಾಭ್ಯಾಸಿಗಳಿಗೂ, ವಿದ್ಯಾರ್ಥಿ ಸಮುದಾಯಕ್ಕೂ ಅತ್ಯಂತ ಉಪಯುಕ್ತವಾದ ಈ ಗ್ರಂಥದ ಬೆಲೆ ಪ್ರತಿ ಒಂದಕ್ಕೆ ರೂ. ೧೫೦/– ಅಥವಾ ಅದಕ್ಕೂ ಮಿಗಿಲಾಗಬಹುದು. ಎಲ್ಲರಿಗೂ ಗ್ರಂಥ ಸುಲಭ ಬೆಲೆಯುಲ್ಲಿ ದೊರೆಯಲೆಂಬ ಸದುದ್ದೇಶದಿಂದ ಅದರ ಪ್ರಕಾಶನಪೂರ್ವದ ಬೆಲೆಯನ್ನು ರೂ. ೧೨೦/– ಎಂದು ಗೊತ್ತುಪಡಿಸಲಾಗಿದೆ. ಮೊಬಲಗನ್ನು ಮನಿಆರ್ಡರ್ ಅಥವಾ ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಎರಡು ಕಂತುಗಳಲ್ಲಿ ಕಳುಹಿಸಿಕೊಡಬಹುದು. ತಾ. ೧೦–೧೨–೭೫ರ ಒಳಗಾಗಿ

ಒಂದೇ ಕಂತಿನಲ್ಲಿ ಪಾವತಿಮಾಡುವವರು ರೂ. ೧೦೦/– ಕಳುಹಿಸಬಹುದು. ಹಣ ಕಳುಹಿಸುವವರ ಹೆಸರು ಮತ್ತು ವಿಳಾಸ ಸ್ಪಷ್ಟವಾಗಿರಬೇಕು.

ಈ ಗ್ರಂಥವನ್ನು ತಾ. ೩೧–೧೨–೭೭ರ ವೇಳೆಗೆ ಪ್ರಕಟಿಸಲಾಗುವುದು. ಪ್ರಕಟಣ ಕಾರ್ಯವು ದುಸ್ಸಾಧ್ಯವೆನಿಸಿರುವ ಈ ಕಾಲದಲ್ಲಿ ಈ ಬೃಹತ್ ಗ್ರಂಥದ ಪ್ರಕಟಣೆಯ ಸಾಹಸಕ್ಕೆ ಕೈ ಹಾಕಿರುವುದು, ಕನ್ನಡ ಬಂಧುಗಳು, ತಾವು ಖಂಡಿತವಾಗಿಯೂ ಕೈಬಿಡುವುದಿಲ್ಲವೆಂಬ ದೃಢ ನಂಬುಗೆಯಿಂದ.

ಮಾನ್ಯ ಮಿತ್ರರೆ, ತಮ್ಮೆಲ್ಲರ ಸ್ನೇಹ, ಸಾಹಿತ್ಯಪ್ರೇಮ, ಔದಾರ್ಯ ಮುಂತಾದವುಗಳನ್ನು ಅಖಂಡವಾಗಿ ಅನುಭವಿಸಿರುವ ನಾನೀಗ ತಮ್ಮೆಲ್ಲರ ಕೊಡುಗೈಯನ್ನು ನೆಚ್ಚಿಕೊಂಡೇ ಈ ಕಾರ್ಯದಲ್ಲಿ ತೊಡಗಿದ್ದೇನೆ. ಸರಕಾರಗಳಿಂದಾಗಲೀ, ಸಂಘಸಂಸ್ಥೆಗಳಿಂದಾಗಲೀ ಸಹಾಯ ದೊರೆಯಬೇಕಾದರೂ ಸಹ ಸುಸಂಸ್ಕೃತರೂ ಸಾಹಿತ್ಯಪ್ರೇಮಿಗಳೂ ಆದ ತಮ್ಮಂಥವರ ನೆರವು ಬೇಕೇ ಬೇಕು.

ಕಡೆಯದಾಗಿ ತಮ್ಮಲ್ಲಿ ನನ್ನದೊಂದು ಪ್ರಾರ್ಥನೆ. ಉದಾರ ಮನಸ್ಸಿನಿಂದ, ದೃಢವಿಶ್ವಾಸದಿಂದ ಗ್ರಂಥದ ಪ್ರಕಟಣಪೂರ್ವ ಬೆಲೆಯನ್ನು ತಮಗೆ ಎಷ್ಟು ಪ್ರತಿಗಳು ಬೇಕೋ ಅಷ್ಟಕ್ಕೆ ಶುಭಾಶಯಗಳೊಡನೆ ದಯವಿಟ್ಟು ಕಳುಹಿಸಿಕೊಡಿ. ತಮ್ಮ ಸ್ನೇಹಿತರಿಗೂ ತಿಳಿಸಿ ಅವರಿಂದಲೂ ಇದೇ ಬಗೆಯ ಸಹಾಯ, ಇದಕ್ಕೂ ಮಿಗಿಲಾದ ಸಹಾಯ ದೊರೆಯುವಂತೆ ಮಾಡಿ. ಕೈಗೊಂಡಿರುವ ಕಾರ್ಯ ಕೈಗೂಡುವಂತೆ ಮಾಡುವುದು ತಮಗೆ ಸೇರಿದ್ದು.

ವಿಶ್ವಾಸ ಪೂರ್ವಕ ನಮಸ್ಕಾರಗಳು.

ಇಂತು ತಮ್ಮವ,

**ಎಚ್. ಎಸ್. ಅಚ್ಚಪ್ಪ**



# An Appeal

The Karnataka Government graciously sanctioned and paid me an advance of Rs. 5,000/– to enable me to get the book, "*A Book of Sanskrit Proverbs and Quotations*" printed and published. The Sanskrit lines are given in Kannada script followed by a free translation of the lines in Kannada. The advance granted by the Government is the price of 50 copies of the work at pre-publication rate of Rs. 100/– per copy.

The book in print comes to 1,000 pages in Demy 8 vo. Should it be printed at a fairly big press or a press of standing, the mere printing cost for 1,000 copies amounts to Rs. 40,000/–. Further, as the presses have been working under a 50% power-cut it may take at least one year for the work to come out of the press assuming that the press concerned is quite efficient. Small presses cannot be entrusted with a stupendous work of this type. This is too big an apple for their mouths. With regard to irreputable presses, their Cheap John method of doing things do not appeal to me.

No press, however, will undertake the printing, unless 50% of the estimated cost is paid in advance. To get printed no more than 500 copies of the work—even that much—Rs. 10,000/– will have to be paid in advance to the press. As such, the advance sanctioned by the Government has thus proved quite inadequate.

In response to my application for patronage, the Central Government directed that after the printing is completed, I should submit to them a copy of the printed work together with the printer's bill and they would get the bill of cost duly scrutinised and sanction 50% of the actual cost of printing ascertained and approved by the Ministry. The conditions are almost like fetters of gold. To accept their munificience would seem to be to submit one's head to a noose.

Nor is it possible to borrow the required funds from any of the nationalised banks, as none would sanction a loan without adequate security. The 'reasonable interest' they levy is by no

means small. To borrow from them would be like borrowing money to get an ear-ring made only to sell it away in order to pay the interest.

The contemplated work of printing of the book has thus remained unbegun.

It seemed best, in the circumstances to return the sanctioned advance to the Government, to repay the financial help I have received so far from several friends and well-wishers, and give up altogether the idea of publishing the work. But then, an immortal line of the Katha Sarit Sagara came into my head: "Tatkshanena no kim kuryat prasannah parameswarah" (If it pleaseth the Supreme Lord, what indeed will He not do at once?) Instantly, I resolved to leave no stone unturned. And here is one more effort of mine. And what does it amount to? All that I can do is to invoke my household God, Sri Laxmi Janardana Swamy and pray to HIM, "Lead Kindly Light, amidst the encircling gloom, lead Thou me on," and, remembering that Vox Pouli Vox Dei, appeal

(1) to the Director, Kannada and Culture, Government of Karnataka, to sanction me the price of 50 more copies of the book "*Sanskrit Proverbs and Quotations*" as a further advance in order to help the publication of the work;

(2) to the Director of Text Books and to the State Library Authority, each one, to make a bulk purchase of at least 100 copies of my earlier work, "*Granthastha Gadegalu*" for the libraries under their jurisdiction and

(3) to all friends and well-wishers of mine (a) to buy "*Granthastha Gadegalu*" and (b) to place orders for as many copies of my present work, viz., "*A Book of Sanskrit Proverbs and Quotations*" as they may be pleased to buy, and send me the amount at the pre-publication price of Rs. 100/– per copy on or before 10th March 1978

Mysore,
22nd Jan. 1978

**H. S. ACHAPPA,**
323, 5th Main Road,
Jayanagar, Mysore-570014




**ಡಾ. ಸಿ. ಪಿ. ಕೃಷ್ಣ ಕುಮಾರ್,**

ಎಂ.ಎ., ಪಿಎಚ್.ಡಿ.,

ಕನ್ನಡ ಪ್ರಾಧ್ಯಾಪಕರು

ಮೈಸೂರು ವಿಶ್ವವಿದ್ಯಾನಿಲಯ


ಮಾನಸಗಂಗೋತ್ರಿ,

ಮೈಸೂರು

5—7—1976

ಶ್ರೀ ಎಚ್ ಎಸ್. ಅಚ್ಚಪ್ಪನವರ ಸಂಸ್ಕೃತ ಲೋಕೋಕ್ತಿಗಳು ಮತ್ತು ಕವಿಸೂಕ್ತಿಗಳು ಅತ್ಯಂತ ಉಪಯುಕ್ತವಾದ ಮತ್ತು ವಿಶಿಷ್ಟವಾದ ಕೃತಿ. ಈ ಬಗೆಯ ಕೆಲಸ ಕನ್ನಡದಲ್ಲಿ ಹಿಂದೆ ಅಲ್ಪ ಪ್ರಮಾಣದಲ್ಲಿ ಆಗಾಗ ನಡೆದಿದ್ದರೂ, ಇಷ್ಟೊಂದು ದೊಡ್ಡ ಪ್ರಮಾಣದಲ್ಲಿ ಯೋಜನಾಬದ್ಧವಾಗಿ ನಡೆದಿರಲಿಲ್ಲ. ಅಚ್ಚಪ್ಪನವರ ಗ್ರಂಥ ಗಾತ್ರ, ಸೂತ್ರ ಎರಡರಿಂದಲೂ ಬಹಳ ಮಹತ್ತ್ವಪೂರ್ಣವಾದುದು. ಇದರ ಹಿಂದೆ ದೀರ್ಘ ಕಾಲಾವಧಿಯ ಶ್ರಮಪೂರ್ವಕವಾದ ದುಡಿಮೆಯಿದೆ. ಕನ್ನಡಕ್ಕೆ ಇದು ನಿಜವಾಗಿಯೂ ಒಂದು ಶ್ರೇಷ್ಠವಾದ ಕೊಡುಗೆ.

ಒಂದು ಮಾತಿನಲ್ಲಿ ಹೇಳುವುದಾದರೆ, ಅಚ್ಚಪ್ಪನವರು ಮಾಡಿರುವ ಕಾರ್ಯ ಅದ್ಭುತವಾದುದು; ಎಲ್ಲ ಬಗೆಯ ಪ್ರೋತ್ಸಾಹಕ್ಕೂ ಯೋಗ್ಯವಾದುದು.

ಸಿ. ಪಿ. ಕೃಷ್ಣಕುಮಾರ್

**ತ. ಸು. ಶಾಮರಾಯ, ಎಂ.ಎ.**
ನಿವೃತ್ತ ಕನ್ನಡ ಅಧ್ಯಾಪಕರು,
ಮೈಸೂರು ವಿಶ್ವವಿದ್ಯಾನಿಲಯ

**ಮೈಸೂರು-4**

**4-7-1976**

ಸಂಸ್ಕೃತ ಸಾಹಿತ್ಯಸಾಗರದ ಉದ್ದಗಲದಲ್ಲಿ ಆಳವಾಗಿ ಇಳಿದು, ಅಲ್ಲಿನ ಲೋಕೋಕ್ತಿ, ಕವಿಸೂಕ್ತಿಗಳ ಮುತ್ತು ಹವಳಗಳನ್ನು ಆಯ್ದು, ಸಾಹಿತ್ಯಪ್ರೇಮಿಗಳ ಮನ ಸೆಳೆಯುವಂತೆ ಅವುಗಳನ್ನು ಓರಣವಾಗಿ, ಕ್ರಮಬದ್ಧವಾಗಿ—ಅಕಾರಾದಿಯಾಗಿ—ಜೋಡಿಸಿ ನೀಡಿರುವ ಈ ಬೃಹದ್‌ಗ್ರಂಥ ಸಂಸ್ಕೃತ ಲೋಕೋಕ್ತಿಗಳು ಹಾಗೂ ಕವಿ ಸೂಕ್ತಿಗಳು ಶ್ರೀಮಾನ್ ಎಚ್. ಎಸ್. ಅಚ್ಚಪ್ಪನವರು ಮಾಡಿರುವ ಒಂದು ಪುಟ್ಟ ಪವಾಡ. ಇಂತಹ ಕೆಲಸಕ್ಕೆ ಕೈಹಾಕಿ ದುಡಿದಿರುವವರು ಮಾತ್ರವೇ ಇದನ್ನು ಅರ್ಥ ಮಾಡಿಕೊಳ್ಳುವುದು ಸಾಧ್ಯ. ಗ್ರಂಥಕರ್ತರ ಪ್ರತಿಭೆ, ಪಾಂಡಿತ್ಯ, ಲೋಕಾನುಭವಗಳಿಗೆ ಮಾತ್ರವೇ ಅಲ್ಲದೆ ಅವರ ಬಿಡುವಿಲ್ಲದ ದುಡಿಮೆ, ಕರ್ತೃತ್ವಶಕ್ತಿ, ಆಸಕ್ತಿ, ಅನುರಕ್ತಿ, ಸಹನೆಗಳಿಗೆ ಹಿಡಿದ ಕನ್ನಡಿಯಂತಿದೆ ಅವರ ಈ ಸಾಹಸದ ಕೃತಿ. ಕನ್ನಡ ಗಾದೆಗಳನ್ನು ಕುರಿತು ಅವರು ಕನ್ನಡಕ್ಕೆ ನೀಡಿರುವ ಕೊಡುಗೆ ಎಷ್ಟು ಮಹತ್ತಾದುದೆಂಬುದು ಕನ್ನಡಾಭಿಮಾನಿಗಳಿಗೆಲ್ಲ ಈಗಾಗಲೇ ಗೊತ್ತಿರುವ ವಿಷಯ. ಅವರ ಅಧ್ಯವಸಾಯದಿಂದ ಕನ್ನಡ ಸಾಹಿತ್ಯದ ಶ್ರೀಮಂತಿಕೆ ಬೆಳೆಯುತ್ತಿದೆ. ಆದರೆ ಈ ಸಾರಸ್ವತ ಸೇವಕ ಮಾತ್ರ 'ಸಪ್ತಾಕ್ಷರೀ ಮಂತ್ರ'ವನ್ನು ಜಪಿಸುತ್ತಿರುವುದು ತಪ್ಪಿಲ್ಲ. ಅವರ ಸೇವೆಯ ಫಲ ಸಾರ್ವಜನಿಕರ ಸ್ವತ್ತಾಗಬೇಕಾದರೆ ಲಕ್ಷ್ಮೀಕಟಾಕ್ಷ ಅತ್ಯಗತ್ಯ. ಅದು ಸರ್ಕಾರದ, ಸಾರ್ವಜನಿಕರ ಔದಾರ್ಯವನ್ನು ಅವಲಂಬಿಸಿದೆ. ನಿರಾಶ್ರಯಾ ನ ಶೋಭಂತೇ ಪಂಡಿತಾ ವನಿತಾ ಲತಾ. ಪಂಡಿತರಾದ ಶ್ರೀ ಅಚ್ಚಪ್ಪನವರಿಗೆ ಸೂಕ್ತವಾದ ಆಶ್ರಯ ಸಾಕಷ್ಟು ದೊರೆತು ಅವರು ಕೈಕೊಂಡಿರುವ ಸತ್ಕಾರ್ಯ ಸಫಲವಾಗಲೆಂದು ಹಾರೈಸುತ್ತೇನೆ.

ತ. ಸು. ಶಾಮರಾಯ.

ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರೀ,
ಎಂ.ಎ., ಪಿಎಚ್.ಡಿ.,

ಉಪಪ್ರಾಧ್ಯಾಪಕರು,
ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ

ಮಾನಸಗಂಗೋತ್ರಿ,
ಮೈಸೂರು - 570 006.

6–7–1976

ಶ್ರೀಮಾನ್ ಎಚ್. ಎಸ್. ಅಚ್ಚಪ್ಪನವರು ಪ್ರಕಟಿಸಲು ಉದ್ದೇಶಿಸಿರುವ ಸಂಸ್ಕೃತ ಲೋಕೋಕ್ತಿಗಳು ಹಾಗೂ ಕವಿಸೂಕ್ತಿಗಳು ಎಂಬ ಉದ್ಗ್ರಂಥದ ಹಸ್ತಪ್ರತಿಯ ಕೆಲವು ಭಾಗಗಳನ್ನು ನಾನು ಓದಿದ್ದೇನೆ.

ತಮ್ಮ ಜೀವನವನ್ನೂ ಜೀವನದೃಷ್ಟಿಯನ್ನೂ ಆಪ್ತರ, ಆರ್ಷರೆಂಬವರ ವಾಕ್ಯಗಳಿಂದಲೂ ಅನುಭವದ ಪಾಠಗಳಿಂದಲೂ ತಿದ್ದಿ ಹಸನು ಮಾಡಿಕೊಳ್ಳಬೇಕೆಂಬ ಆಸೆಯುಳ್ಳ ಎಲ್ಲರಿಗೂ, ಶ್ರೀಯುತರ ಗ್ರಂಥ ಒಂದು 'ಕೈವೊಕ್ಕ ನಿಧಿ' ಆಗಿ ಒದಗುವುದು ಸಾಧ್ಯವಿದೆಯೆಂದು ನನಗೆ ಕಂಡಿದೆ. ಸುಭಾಷಿತಗಳ ಕಲಿಕೆ ಪ್ರಾಚೀನ ವಿದ್ಯಾಭ್ಯಾಸದ ಒಂದು ಅಂಗವಾಗಿದ್ದ ಕಾಲ ಇಂದು ಕಳೆದುಹೋಗಿದೆ: "ಜೀರ್ಣಮಂಗೇ ಸುಭಾಷಿತಂ" ಎಂದು ಕೊರಗುವಂತಾಗಿದೆ. ಇಂಥ ಸಂದರ್ಭದಲ್ಲಿ ಈ ಬಗೆಯ ದೊಡ್ಡ ಪ್ರಯತ್ನಗಳ ಮೂಲಕ ಅವನ್ನು ಉಳಿಸಲು, ಉಪಯೋಗಕ್ಕೆ ನೀಡಲು ಯಾರಾದರೂ ಶ್ರಮಿಸಿದಲ್ಲಿ, ಅವರಿಗೆ ಖಂಡಿತವಾಗಿ ಪ್ರೋತ್ಸಾಹ ಸಹಾಯಗಳು ದೊರೆಯುವುದಾಗಬೇಕು. ಈಗ ಶ್ರೀ ಅಚ್ಚಪ್ಪನವರು ನಾನಾ ಮೂಲಗಳಿಂದ ವಿಪುಲವಾಗಿ ಸುಭಾಷಿತಗಳನ್ನು ಸಂಗ್ರಹಿಸಿ, ಸಂಯೋಜಿಸಿದ್ದಾರೆ; ಮೂಲದೊಂದಿಗೆ ಅನುವಾದವನ್ನೂ ಒಟ್ಟಿಗೆ ಕೊಟ್ಟಿದ್ದಾರೆ. ಅವರ ಹಸ್ತಪ್ರತಿ ಪ್ರಕಟವಾಗುವಂತಾದರೆ, ಅವರ ಪರಿಶ್ರಮಕ್ಕೆ ತಕ್ಕ ಫಲ ಸಿಕ್ಕಂತಾಗುತ್ತದೆ. ಕನ್ನಡದ ಬೆಳವಣಿಗೆಗೆ ಆ ಮೂಲಕವಾಗಿ ದೊಡ್ಡ ಒತ್ತಾಸೆಯನ್ನು ಕೊಟ್ಟಂತಾಗುತ್ತದೆ. ಹಾಗಾಗಲೆಂಬುದೇ ನನ್ನ ಹಾರೈಕೆ.

ಟಿ. ವಿ. ವೆಂಕಟಾಚಲ ಶಾಸ್ತ್ರೀ

ವಿದ್ವಾನ್,
ಡಾ. ಹೆಚ್. ಪಿ. ಮಲ್ಲೇದೇವರು,
ಎಂ.ಎ., ಪಿಹೆಚ್.ಡಿ.,
ಸಂಸ್ಕೃತ ಪ್ರಾಧ್ಯಾಪಕರು,
ಸ್ನಾತಕೋತ್ತರ ಸಂಸ್ಕೃತ ವಿಭಾಗ. ಮಾನಸ ಗಂಗೋತ್ರಿ,
ನಿರ್ದೇಶಕರು,
ಪ್ರಾಚ್ಯ ವಿದ್ಯಾ ಸಂಶೋಧನಾಲಯ. ಮೈಸೂರು.

ಮಾನಸಗಂಗೋತ್ರಿ,
ಮೈಸೂರು - 570006

6–7–1976

ಶ್ರೀಯುತ ಎಚ್. ಎಸ್. ಅಚ್ಚಪ್ಪ ಅವರು ಸಂಸ್ಕೃತ ಕೃತಿಗಳು ಮತ್ತು ಸುಭಾಷಿತ ರತ್ನ ಭಾಂಡಾಗಾರದಿಂದ ಸಂಸ್ಕೃತ ಸಾಹಿತ್ಯದಲ್ಲಿನ ಸುಭಾಷಿತಗಳನ್ನು ಆಯ್ದುಕೊಂಡು ಅವುಗಳನ್ನು ಅಕಾರಾದಿಯಾಗಿ ಹೊಂದಿಸಿ, ಅವುಗಳಿಗೆ ಕನ್ನಡದಲ್ಲಿ ಭಾಷಾಂತರ ಕೊಟ್ಟು ಪ್ರಕಟಿಸಲು ಪ್ರಯತ್ನಿಸಿರುವುದು ಸ್ತುತ್ಯವಾದ ವಿಷಯ... ಶ್ರೀ ಅಚ್ಚಪ್ಪನವರ ಶ್ರಮ ಶ್ಲಾಘನೀಯವಾದುದು. ಶ್ರೀ ಅಚ್ಚಪ್ಪನವರ ಪ್ರಶಂಸನೀಯವಾದ ಕಾರ್ಯವನ್ನು ಮಹಾಜನರು ಸಂತಸದಿಂದ ಸ್ವಾಗತಿಸುವರೆಂದು ನಂಬಿದ್ದೇನೆ.

**ಹೆಚ್. ಪಿ. ಮಲ್ಲೇದೇವರು.**

# ಬೆಂಗಳೂರು ವಿಶ್ವವಿದ್ಯಾನಿಲಯ

**ಡಾ. ಜಿ. ಎಸ್. ಶಿವರುದ್ರಪ್ಪ,**
ಎಂ.ಎ., ಪಿಎಚ್.ಡಿ.,
ಕನ್ನಡ ಪ್ರಾಧ್ಯಾಪಕರು ಮತ್ತು
ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರು.

ಜ್ಞಾನಭಾರತಿ,
**ಬೆಂಗಳೂರು - 56.**

8–7–1976

ಶ್ರೀಮಾನ್ ಅಚ್ಚಪ್ಪನವರು ಈಗಾಗಲೇ ವಿಶೇಷ ಪ್ರಮಾಣದ ಸಂಕಲನ ಗ್ರಂಥಗಳನ್ನು ಪ್ರಕಟಿಸಿ ಹೆಸರಾಗಿದ್ದಾರೆ. ಇದೀಗ ಅವರು ಸಂಸ್ಕೃತ ಲೋಕೋಕ್ತಿಗಳು ಮತ್ತು ಕವಿಸೂಕ್ತಿಗಳು ಎಂಬ ಬೃಹತ್ ಸಂಕಲನವನ್ನು ಸಿದ್ಧಪಡಿಸಿದ್ದಾರೆ. ಈ ಗ್ರಂಥವು ನಮ್ಮ ಪ್ರಾಚೀನ ಪರಂಪರೆಯ ವಿವೇಕವನ್ನು ಪರಿಚಯ ಮಾಡಿಕೊಡುವ ಸ್ವರೂಪದ್ದಾಗಿದೆ. ಈ ಕೃತಿಯ ಪ್ರಕಟಣೆ ಅತ್ಯಂತ ಅಗತ್ಯವಾದುದು ಮತ್ತು ಅದಕ್ಕೆ ಎಲ್ಲ ಬಗೆಯ ನೆರವನ್ನು ನೀಡಬೇಕಾಗಿದೆ.

**ಜಿ. ಎಸ್. ಶಿವರುದ್ರಪ್ಪ**

**ಡಾ. ಎಂ. ಚಿದಾನಂದ ಮೂರ್ತಿ,**

ಎಂ.ಎ., ಪಿಎಚ್.ಡಿ., ಕನ್ನಡ ಅಧ್ಯಯನ ಕೇಂದ್ರ,

ಕನ್ನಡ ಪ್ರಾಧ್ಯಾಪಕರು,
ಬೆಂಗಳೂರು ವಿಶ್ವವಿದ್ಯಾನಿಲಯ.

ಬೆಂಗಳೂರು - 56

8–7–1976

ಶ್ರೀ ಅಚ್ಚಪ್ಪನವರು ವಿಶೇಷ ಪರಿಶ್ರಮದಿಂದ ಮತ್ತು ಎಚ್ಚರಿಕೆಯಿಂದ ಸಿದ್ಧಪಡಿಸುತ್ತಿರುವ—ಅಥವಾ ಸಿದ್ಧಪಡಿಸಿರುವ—ಸಂಸ್ಕೃತ ಸೂಕ್ತಿಗಳ ಕೋಶದಂತಿರುವ ಬೃಹತ್‌ಗ್ರಂಥದ ಮಾದರಿ ಪುಟಗಳನ್ನು ಓದಿ ಸಂತೋಷವಾಯಿತು. ಕನ್ನಡ ಗಾದೆಗಳಿಗಾಗಿ ಶ್ರಮಿಸಿರುವ ಶ್ರೀ ಅಚ್ಚಪ್ಪನವರ ಗಮನ ಸಂಸ್ಕೃತ ಸುಭಾಷಿತಗಳನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಡುವುದರ ಕಡೆ ಹರಿದದ್ದು ಅಭಿನಂದನೀಯ ಸಂಗತಿ. ಆಯ್ಕೆ ಮಾಡಿರುವ ಒಂದೊಂದು ವಾಕ್ಯವೂ ಶ್ಲೋಕವೂ ಬಹುಕಾಲ ನೆನಪಿನಲ್ಲಿ ಉಳಿಯುವಂತಹುದು; ನಮಗೆ ಅರಿವಿಲ್ಲದೆಯೇ ಮಾರ್ಗದರ್ಶಿಯಾಗುವಂತಹುದು. ಇಂತಹ ಸಾವಿರಾರು ಸುಭಾಷಿತಗಳನ್ನು ಆಯ್ಕೆಮಾಡಿ, ಅಷ್ಟೇ ಹಿತಮಿತವಾಗಿ ಅನುವಾದಿಸಿದ್ದಾರೆ. ಅವರ ಅನುವಾದ, ಮೂಲವನ್ನು ಅರ್ಥಮಾಡಿಕೊಳ್ಳುವುದಕ್ಕೆ ನಿಜಕ್ಕೂ ಸಹಾಯಕಾರಿಯಾಗಿದೆ.

ಈ ಕಾರ್ಯ—ಅವರಿಂದ ಆಗುತ್ತಿದೆ. ಜೊತೆಗೆ ಇದರ ಪ್ರಕಟನ ಕಾರ್ಯವೂ ನಿರ್ವಿಘ್ನವಾಗಿ ಪೂರೈಸಲೆಂದು ಹಾರೈಸುತ್ತೇನೆ. ಅಚ್ಚಪ್ಪನವರಿಗೆ ಎಲ್ಲ ಬಗೆಯ ಸಹಕಾರವು ಕನ್ನಡಿಗ ಸಾಹಿತ್ಯಪ್ರೇಮಿಗಳಿಂದ ದೊರೆಯಲಿ.

ಎಂ. ಚಿದಾನಂದ ಮೂರ್ತಿ.

**ಎಸ್. ವಿ. ಪರಮೇಶ್ವರ ಭಟ್ಟ** ಎಂ. ಎ.,
ಯು ಜಿ ಸಿ ಕನ್ನಡ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ.

ಮಾನಸಗಂಗೋತ್ರಿ,
**ಮೈಸೂರು.**

**26–6–1980**

ಶ್ರೀಯುತ ಎಚ್. ಎಸ್. ಅಚ್ಚಪ್ಪನವರು ನನ್ನ ಶಿಷ್ಯಮಿತ್ರರು. ಇವರು ಕಳೆದ ಮೂರು ದಶಕಗಳಿಂದ ಕನ್ನಡದ ಸಾಹಿತ್ಯದ ಸೇವೆಯನ್ನು ಕೈಕೊಂಡು ವಿಶಿಷ್ಟವಾದ ಕೊಡುಗೆಗಳ ಮೂಲಕ ಕನ್ನಡದ ಸಾರಸ್ವತ ಸಂಪತ್ತನ್ನು ಹೆಚ್ಚಿಸಿದ್ದಾರೆ. ಇವರು ಜನಪದ ಸಾಹಿತ್ಯದ ಒಂದು ಪ್ರಕಾರವಾದ ಗಾದೆಗಳನ್ನು ಒಂದು ದೊಡ್ಡ ಹೊತ್ತಗೆಯನ್ನಾಗಿ ಪ್ರಕಟಿಸಿದ್ದಾರೆ. ಇದಲ್ಲದೆ ಗ್ರಂಥಸ್ಥ ಗಾದೆಗಳನ್ನು ಕೂಡಿಸಿ, ಜೋಡಿಸಿ, ಪ್ರಕಟಿಸಿ ಮಹೋಪಕಾರ ಮಾಡಿದ್ದಾರೆ.

ಈ ಸಾಹಿತ್ಯಬಂಧುವಿನ ಕಾರ್ಯ ದೊಡ್ಡದು. ಇದಕ್ಕಾಗಿ ಈ ಬಂಧು ತಮ್ಮ ಬದುಕನ್ನೇ ಮುಡಿಪಾಗಿಟ್ಟು ಕೆಲಸ ಮಾಡಿದ್ದಾರೆ. ಈಗ ಈ ಕೆಲಸದ ಫಲವಾಗಿ **ಸಂಸ್ಕೃತ ಲೋಕೋಕ್ತಿಗಳು ಮತ್ತು ಕವಿಸೂಕ್ತಿಗಳು** ಎಂಬ ಬೃಹತ್‌ಗ್ರಂಥ ಬರಲಿದೆ. ಇಲ್ಲಿ ಮೂಲ ಸಂಸ್ಕೃತದ ಪಾಠವನ್ನು ಕನ್ನಡ ಲಿಪಿಯಲ್ಲಿ ಕೊಟ್ಟಿದ್ದಾರೆ. ಜೊತೆಗೆ ಸರಳವೂ ಸುಂದರವೂ ಆದ ಗದ್ಯದಲ್ಲಿ ಆ ಶ್ಲೋಕಗಳ ಅಥವಾ ಶ್ಲೋಕಪಾದಗಳ ಅನುವಾದಗಳನ್ನು ಕೊಟ್ಟಿದ್ದಾರೆ. ಈ ಕೃತಿ ಲೋಕದ ಕಣ್ಣನ್ನು ತೆರೆಯಿಸುವಂಥ ಕೃತಿ. ಯುವ ಜನಾಂಗಕ್ಕೆ ಅಗತ್ಯವಾಗಿ ಬೇಕಾಗಿರುವ ಲೋಕಾನುಭವವನ್ನು ಒದಗಿಸಿ ಕೊಡುವ ಕೃತಿಯಾಗಿದೆ. ಸಹಸ್ರಸಹಸ್ರ ಕವಿಗಳ, ಬುದ್ಧಿಜೀವಿಗಳ, ಅನುಭವಸ್ಥರ ಹಿತೋಪದೇಶ ಈ ಸೂಕ್ತಿಗಳಲ್ಲಿ ಪರಳುಗಟ್ಟಿ ನಿಂತಿದೆ.

ಶ್ರೀಯುತರ ಈ ಕಾರ್ಯ ಒಂದು ತಪಸ್ಸು ಎಂಬಂತೆ ನಡೆಯುತ್ತಿದೆ. ಹಣದ ಅಭಾವ, ಆರೋಗ್ಯದ ಕೊರತೆ, ಅಧ್ಯಯನ ಸೌಕರ್ಯಗಳ ತೊಂದರೆ ಮುಂತಾದುವುಗಳನ್ನು ಲೆಕ್ಕಿಸದೆ ಈ ಧೀಮಂತರು ಈ ಕಾರ್ಯದಲ್ಲಿ ಹೀಗೆ ಮುಂದುವರಿದು ಕನ್ನಡಿಗರಿಗೆ ಅಮೋಘವಾದ ಕೃತಿರತ್ನಗಳನ್ನು ಕೊಟ್ಟು ಕೃತಾರ್ಥರಾಗಿದ್ದಾರೆ.

ಇಂಥ ಸಂದರ್ಭದಲ್ಲಿ ಕನ್ನಡಿಗರ ಹೊಣೆಗಾರಿಕೆ ದೊಡ್ಡದು. ಗುಣಾಢ್ಯರೂ, ಧನಾಢ್ಯರೂ ಆದ ಮಹಾಜನರು ಇಂಥ ಕೃತಿಗಳನ್ನು ಕೊಂಡು ಓದುವುದರ ಮೂಲಕ ಶ್ರೀಯುತರಿಗೆ ಪ್ರೋತ್ಸಾಹ ನೀಡಬೇಕು. ಸರಕಾರ, ವಿಶ್ವವಿದ್ಯಾನಿಲಯಗಳು, ಪುಸ್ತಕ ಭಂಡಾರಗಳು ಪರಿಷತ್ತುಗಳು ಇವರ ಕೃತಿಯನ್ನು ಕೊಳ್ಳಬೇಕು. ಹೀಗೆ ಮಾಡುವುದರಿಂದ ಇವರಿಂದ ಇನ್ನಷ್ಟು ಹೆಚ್ಚಿನ ಸೇವೆಯನ್ನು ನಾಡು ಪಡೆಯಲು ಸಾಧ್ಯವಾಗುತ್ತದೆ. ನಮ್ಮ ಮನೆಮಂದಿಯವರೆಲ್ಲ ವರ್ಷದ ಉದ್ದಕ್ಕೂ, ಜೀವಮಾನದ ಉದ್ದಕ್ಕೂ ಈ ಸೂಕ್ತಿಗಳ ಅಧ್ಯಯನದಿಂದ ಜ್ಞಾನಸಂಪನ್ನರಾಗಿ, ಸನ್ಮಾರ್ಗ ಪ್ರವರ್ತಕರಾಗಿ ಬಾಳುವುದಕ್ಕೆ ಸಾಧ್ಯವಿದೆ. ಹಾಗಾಗಲಿ ಎಂದು ಹಾರೈಸುತ್ತೇನೆ.

**ಎಸ್. ವಿ. ಪರಮೇಶ್ವರ ಭಟ್ಟ.**

**ಡಾ. ಆರ್. ಎಸ್. ಶಿವಗಣೇಶ ಮೂರ್ತಿ,**

ಎಂ.ಎ., ಪಿಎಚ್.ಡಿ.,

ಉಪಪ್ರಾಧ್ಯಾಪಕರು,
ಸಂಸ್ಕೃತ ವಿಭಾಗ,
ಮೈಸೂರು ವಿಶ್ವವಿದ್ಯಾನಿಲಯ.

ಮಾನಸಗಂಗೋತ್ರಿ,
**ಮೈಸೂರು – 570 006**

18–7–81

ಶ್ರೀ ಎಚ್. ಎಸ್. ಅಚ್ಚಪ್ಪನವರು ಹಲವು ವರ್ಷಗಳಿಂದ ನನಗೆ ಪರಿಚಿತರು. ಗ್ರಂಥಸ್ಥ ಗಾದೆಗಳು ಗ್ರಂಥದ ಮುದ್ರಣ ಕರಡು ತಿದ್ದುವಾಗ ಅದರಲ್ಲಿ ಅವರು ಆಯ್ದು ಸೇರಿಸಿದ್ದ ಸಂಸ್ಕೃತ ಪಂಕ್ತಿಗಳ ಸಂಬಂಧದಲ್ಲಿ ನನ್ನಲ್ಲಿಗೆ ಬರುತ್ತಿದ್ದರು. ಆ ಅನುಪಮ ಸಂಗ್ರಹ ಕಾರ್ಯದ ಭಾರವನ್ನೂ, ನಿರಾಧಾರವಾಗಿ ಅಸಹಾಯ ಶೂರರಾಗಿ ಅದನ್ನು ನಿರ್ವಹಿಸಿದ ಶ್ರೀ ಅಚ್ಚಪ್ಪನವರನ್ನೂ ನೆನೆಸಿಕೊಂಡರೆ ಅಚ್ಚರಿಯಾಗದಿರದು. ಅಂಥದ್ದೇ ಮತ್ತೊಂದು ನಿರುಪಮ ಕೊಡುಗೆಯನ್ನು—ಸಂಸ್ಕೃತ ಲೋಕೋಕ್ತಿಗಳು ಮತ್ತು ಕವಿಸೂಕ್ತಿಗಳು—ಶ್ರೀಯುತರು ಕನ್ನಡ ಓದುಗರಿಗೆ ನೀಡಿದ್ದಾರೆ. ಕನ್ನಡ ಗ್ರಂಥಗಳಲ್ಲಿ ಹಾಗೂ ಆಡುಗನ್ನಡದಲ್ಲಿ ಬಳಕೆಯಾದ ಸಂಸ್ಕೃತ ಉಕ್ತಿಗಳನ್ನು ಸಂಗ್ರಹಿಸ ಹೊರಟ ಇವರು. ತಮ್ಮ ವ್ಯಾಪ್ತಿಯನ್ನು ವಿಸ್ತರಿಸಿದುದು ಕನ್ನಡಿಗರ ಸುದೈವ. ಸಂಸ್ಕೃತ ಸಾಹಿತ್ಯ ವನವನ್ನು ಹೊಕ್ಕು ಅಲ್ಲಿನ ವಿಶಿಷ್ಟ ಕುಸುಮಗಳಲ್ಲಿನ ಮಧುವನ್ನು ಸಂಗ್ರಹಿಸಿದ್ದಾರೆ. ತಾವು ಆರಿಸಿದ ಉಕ್ತಿಗಳಿಗೆ ಸರಳ ಅನುವಾದವನ್ನೂ ಒದಗಿಸಿ ಕನ್ನಡ ಬಲ್ಲ ಎಲ್ಲರಿಗೂ ಅದು ಎಟುಕುವಂತೆ ಮಾಡಿದ್ದಾರೆ.

'ಕನ್ನಡ'ದ ಬಗ್ಗೆ ಉದ್ದುದ್ದ ಮಾತನಾಡುತ್ತೇವೆ: ಅದನ್ನು ಇನ್ನೂ ಶ್ರೀಮಂತಗೊಳಿಸಬೇಕಾದ ಅಗತ್ಯವಿದೆ. ಯಾವ ರೀತಿಯಲ್ಲೇ ಆಗಲಿ ಯಾರಿಂದಲೇ ಆಗಲಿ ಆ ದಿಕ್ಕಿನಲ್ಲಿ ನಡೆವ ಕೆಲಸ ಅಚ್ಚುಕಟ್ಟಾಗಿ ಶೀಘ್ರವಾಗಿ ಮುಂದುವರಿಯಲು ಎಲ್ಲ ಸಹಕಾರವನ್ನೂ ನೀಡಬೇಕೆಂಬುದನ್ನೇ ಮರೆಯುತ್ತೇವೆ. ಇದಕ್ಕೆ ನಿದರ್ಶನ ಪ್ರಕೃತ ವಿದ್ವಾಂಸರು. ಇವರ ಈ ಕೃತಿ ನಿರಾತಂಕವಾಗಿ ಅಚ್ಚಾಗಿ ಹೊರಬೀಳಲು ಸಹಕರಿಸುವುದು ಕನ್ನಡದ ಅಭಿಮಾನಿಗಳ ಕರ್ತವ್ಯ.

ಶಿವಗಣೇಶ ಮೂರ್ತಿ.

**ಹೆಚ್. ಶಂಕರಗಣಪತಿ ಘಾಟಕ್,** ಎಂ.ಎ.,
ಶಿರೋಮಣಿ, ವಿದ್ವಾನ್, ಜಿ. ಡಿ. ಆರ್ಟ್
ಸಹಾಯಕ ಸಂಶೋಧಕ I

ಪ್ರಾಚ್ಯ ವಿದ್ಯಾ ಸಂಶೋಧನಾಲಯ,
**ಮೈಸೂರು.**

18–7–1980

ಸಂಸ್ಕೃತ ಲೋಕೋಕ್ತಿಗಳು ಮತ್ತು ಕವಿ ಸೂಕ್ತಿಗಳು ಎಂಬ ಸುಭಾಷಿತ ಗ್ರಂಥವನ್ನು ಕನ್ನಡ ಅನುವಾದದೊಂದಿಗೆ ಸಿದ್ಧಪಡಿಸುತ್ತಿರುವ ಶ್ರೀಮಾನ್ ಅಚ್ಚಪ್ಪನವರು ಸಾರಸ್ವತ ಲೋಕದ ಹಠ ಬಿಡದ ತ್ರಿವಿಕ್ರಮ. ಹಿಡಿದ ಕೆಲಸವನ್ನು 'ಶತಾಯು ಗತಾಯು' 'ಇಂದಲ್ಲದಿದ್ದರೆ ನಾಳೆ'ಯಾದರೂ ಮುಗಿಸಿಯೇ ಬಿಡಬೇಕೆಂಬ ಹಟದ ಈ ಕರ್ಮಠ ಸಾಹಸಿಗೆ ಜೀವನದಲ್ಲಿ ಜಯವು ಖಚಿತವಾದರೂ, ಅದು ಸುಗಮವಾಗಿ ಸಿಕ್ಕಿದೆಯೆಂದು ಹೇಳುವ ಧೈರ್ಯವಂತೂ ನನಗಿಲ್ಲ. ಶ್ರೀಯುತರು ಮೊದಲು ಗ್ರಂಥಸ್ಥ ಗಾದೆಗಳು ಎಂಬ ಕೃತಿರತ್ನವನ್ನು ಕನ್ನಡಿಗರಿಗೆ ನೀಡಿ ಚಿರಪರಿಚಿತರಾಗಿದ್ದಾರೆ. ಈಗ ಇವರು ರಚಿಸುತ್ತಿರುವ ಕೃತಿಯು ಬರಿಯ ಕನ್ನಡವಲ್ಲ, ಕನ್ನಡದಿಂದ ಸಂಸ್ಕೃತವನ್ನು ನುಡಿಸುವ ಸಾಹಸದ ಪ್ರತೀಕ. ಸದಾ ಕ್ರಿಯಾಶೀಲ, ಸತತ ಪಠನಶೀಲ, ಪಂಡಿತ ಮಂಡಳಿಯ ಒಡನಾಟದೊಂದಿಗೆ ಉಂಛ ವೃತ್ತಿಯಿಂದ ಸೂಕ್ತಿರತ್ನಗಳನ್ನು ಹೆಕ್ಕುವ ಇವರ ಜೋಳಿಗೆಯು ಎಂದೆಂದೂ ಬರಿದಾದ್ದೇ ಇಲ್ಲ.

ಶ್ರೀಯುತ ಅಚ್ಚಪ್ಪನವರು ನನಗಿಂತ ತುಂಬು ವರ್ಷಗಳ ಹಿರಿಯರು. ಇವರೊಡನೆ ನನಗಿರುವ ಪರಿಚಯು ಸುಮಾರು ಎಂಟು ಹತ್ತು ವರ್ಷಗಳ ಈಚಿನದು. ಅವರಿಗೂ ನನಗೂ ಜನ್ಮಾಂತರ ಸಂಬಂಧ ವಿರಬೇಕು. ಈಗ ನನಗೂ ಅವರಿಗೂ ಅಚ್ಚುಮೆಚ್ಚಿನ ನೆಚ್ಚಿದೆ. ಏನಾದರೂ ಸರಿಯೆ, ರಚಿಸಿದ ಕೃತಿ ಯನ್ನು ಅಚ್ಚಿನ ಮನೆಗಾಣಿಸಬೇಕು. ಮೆಚ್ಚುಗೆಯಾಗುವಂತೆ ಮಾಡಬೇಕು. ಅಚ್ಚುಮೆಚ್ಚಿನವರ ಕೈಯೊಳಗಿರಿಸಬೇಕೆಂದು ಸದಾ ಹಂಬಲಿಸುವ ಶ್ರೀಯುತರ ಕೃತಿಯು ಈಗ ಅಚ್ಚುಕೂಟದಲ್ಲಿ ಹಾಜರಿ ಪಡೆದಿದೆ. ನಿಚ್ಚಯವಾಗಿಯೂ ಅದು ಹಚ್ಚಹೊಸದಾಗಿ, ಹಚ್ಚಹಸುರಾಗಿ ಪಚ್ಚೆಪೈರಿನಂತೆ ಕನ್ನಡಿಗರ ನೆಲದಲ್ಲಿ ಕಂಗೊಳಿಸುವ ಭಾಗ್ಯ ಸನ್ನಿಹಿತವಾಗಿದೆ. ಸಾಹಿತ್ಯೋಪಾಸಕರ ಅಂಗೈಯನ್ನಲ್ಲ, ಮಡಿಲನ್ನು ತುಂಬುವಷ್ಟು ಪುಷ್ಟವಾಗಿ ಬೆಳೆಯುತ್ತಿದೆ. ಅವರ ಈ ಕೃತಿಯು ನನಗೆ ಕನ್ನಡಿಯೊಳಗಿನ ಗಂಟಿನಂತೆ ಸುಸ್ಪಷ್ಟ.

ಕಿರಿಯನಾದ್ದರಿಂದ ಹರಸುವುದು ತರವಲ್ಲ. ಅವರು ಈ ಕೃತಿ ನಿರ್ಮಾಣದಿಂದ ಸಂಪೂರ್ಣ ಯಶಸ್ಸನ್ನು ಪಡೆದಾಗ ಕನ್ನಡ ನಾಡಿನ ಜನರೇ ಹೆಮ್ಮೆಪಟ್ಟರೆ ಅದು ಅಚ್ಚರಿಯ ವಿಚಾರವೇ ಅಲ್ಲ. ಸರಸ್ವತಿಯು ಶ್ರೀಯುತರ ಬಳಿ ಬಿಡದಂತೆ ಸದಾ ರಕ್ಷಕಳಾಗಿ ನಿಂತು, ಸರಸ್ವತಿಯ ಉಪಾಸಕರು, ಅಭಿಮಾನಿಗಳು, ಬೆಂಗಾವಲು ಮುಂಗಾವಲಾಗಿ ಬಂದಿರುವಾಗ ಅವರ ಯಾವ ಕಾರ್ಯ ತಾನೇ ಕೈಗೂಡದು?

ಅಚ್ಚ ಮನಸ್ಸು, ಕೆಚ್ಚಿನ ಎದೆ, ಸ್ವಚ್ಛವಾದ ಕೃತಿ—ಇಷ್ಟೂ ಇರುವಾಗ ಇದೆಷ್ಟರ ಕೆಲಸ! ಈ ಕೃತಿರತ್ನವನ್ನು ಓದುವ ಭಾಗ್ಯ ನಮ್ಮೆಲ್ಲರದಾಗಲಿ.

ಇಂತು ಅಭಿಮಾನಿ,

**ಹೆಚ್. ಶಂಕರಗಣಪತಿ ಘಾಟಕ್**

**J. R. Lakshmana Rao,**
*Chief Editor,*
English-Kannada Dictionary

Prasaranga,
Mysore–12.

June 16, 1976.

I have read with great pleasure pages of the manuscript, prepared by Sri H. S. Achappa, consisting of famous Sanskrit aphorisms which are often quoted, but whose sources are rarely known and whose precise meanings are seldom understood. Sri H. S. Achappa has taken great pains to collect a great number of such aphorisms and arrange them systematically. He has also traced the sources in most cases and given the precise meanings in clear and simple Kannada. Sri Achappa deserves all encouragement and help to publish the manuscript which is sure to be very interesting and useful to scholars and laymen alike.

**J. R. Lakshmana Rao.**



## UNIVERSITY OF MYSORE

**Dr. G. Marulasiddaiah,** M.A., Ph.D.,
*Professor & Head of the Department of*
*P.G. Studies and Research in Sanskrit*

Manasagangotri,
Mysore–6

July 6, 1976.

The book of *Sanskrit Proverbs and Quotations* is being brought out by Sri H. S. Achappa, Mysore. At a time when our ancient language and culture is undergoing fast change this book comes handy to remind our youth about our past. The selections from Sanskrit authors and anthologies are good and will no doubt be useful for libraries. Pithy statements of varied interest are brought together and in a way it is indirectly a revival of our past glory. I wish all encouragement and success to the author. Such works are desideratum for any day.

**G. Marulasiddaiah.**

**Prof. K. T. Pandurangi,** M.A.
*Head of the Post-Graduate*
*Dept. of Sanskrit,*
*Bangalore University.*

132/4, III Block,
Jayanagar,
Bangalore-11,

9th July, 1976.

I read with interest the collection of (Sanskrit Proverbs and Pithy Sayings) compiled by Sri Achappa. He has collected about ten thousand quotations from a large number of Sanskrit literary works, arranged them alphabetically, given a lucid Kannada translation and has indicated the source for each quotation. This is a work that has to be really done by a team of scholars, but Sri Achappa has done with great devotion and care. This is a very successful reference work, not only for the students and scholars of Sanskrit, but for all those who are interested in imbibing the wisdom and culture enshrined in Sanskrit literature. These quotations used to be on the tongue of learned men till recently. Now, these will be forgotten if not recorded in such collections. These add a flavour to the conversation and literary discussion and therefore require preservation and constant circulation. This purpose will be amply served by this work of Achappa. I strongly recommend financial assistance from the Government and generous public for this work.

**K. T. Pandurangi.**

# ಸೂಕ್ತಿ–ಸಾಹಸಿ ಅಚ್ಚಪ್ಪ

ಡಾ. ಸಿ. ಪಿ. ಕೆ.

ಸಮಾಜ ಸೇವೆಯ ವಿಧಾನಗಳಲ್ಲಿ ಬರವಣಿಗೆಯೂ ಒಂದು. ಬರವಣಿಗೆಯಲ್ಲೂ ಹಲವು ದಾರಿಗಳು. ಸ್ವತಃ ಉತ್ತು ಬಿತ್ತಿ ಬೆಳೆ ತೆಗೆಯುವವರು ಒಂದು ವರ್ಗ; ಅಂಥ ಬೆಳೆಯಲ್ಲಿ—ಅದರಲ್ಲೂ ಹಳೆಯದರಲ್ಲಿ—ಗಟ್ಟಿಯಾದುದನ್ನು, ಉತ್ಕೃಷ್ಟವಾದುದನ್ನು, ಮೌಲ್ಯವುಳ್ಳದನ್ನು ಒಂದು ಕಡೆ ಕ್ರಮಬದ್ಧವಾಗಿ ಸಂಚಯಿಸಿ ಜನತೆಗೆ ಒದಗಿಸುವವರು ಇನ್ನೊಂದು ವರ್ಗ. ಮೈಸೂರಿನ ಎಚ್. ಎಸ್ ಅಚ್ಚಪ್ಪನವರು ಎರಡನೆಯ ವರ್ಗಕ್ಕೆ ಸೇರುವ ಕುಳ. ಅವರ ಬದುಕೊಂದು ಸಾಹಸ ಗಾಥೆ. ಅವರು ಮಾಡಿರುವ ಕಾರ್ಯ ಯಾರೂ ಕಣ್ಣರಳಿಸಿ ನೋಡಬೇಕಾದದ್ದು. ಅದಕ್ಕೆ ಒಂದೇ ನಿಟ್ಟು, ಒಂದೇ ಗುರಿ.

ಈ ಗುರಿಗೆ ತಮ್ಮನ್ನು ಅಚ್ಚಪ್ಪನವರು ಮುಡಿಪು ಮಾಡಿಕೊಂಡದ್ದು ಬಹಳ ಹಿಂದೆಯೇ. ಧ್ಯೇಯಕ್ಕೆ ಅಡ್ಡಿಯಾಗುತ್ತದೆಂದು ಸರ್ಕಾರಿ ನೌಕರಿಯನ್ನು ತ್ಯಜಿಸಿ, ನೆಮ್ಮದಿಯ ಜೀವನಕ್ಕೆ ಎರವಾದರು. ಮುಳ್ಳಿನ ಹಾದಿಯನ್ನು ಹಿಡಿದರು; ಉದ್ದಕ್ಕೂ ಅದರಲ್ಲೇ ಸಾಗಿಬಂದಿದ್ದಾರೆ. ಈಗ ವಾರ್ಧಕ್ಯದಲ್ಲಿ ಕಾಲಿಟ್ಟಿರುವ ಅಚ್ಚಪ್ಪನವರು ಇದುವರೆಗೂ ಬದುಕನ್ನು ಹೇಗೆ ನಿಭಾಯಿಸಿದರು ಎಂಬುದನ್ನು ಅರ್ಥ ಮಾಡಿಕೊಳ್ಳುವುದು ಕಷ್ಟವೇ. ಈ ಪ್ರಶ್ನೆಗೆ ಉತ್ತರಿಸುವುದು ಅವರಿಗೂ ಸುಲಭವಲ್ಲ. ಯಾವುದೋ ಶಕ್ತಿ ತಮ್ಮನ್ನು ಕಾಪಾಡುತ್ತ ಬಂದಿದೆ, ಕಂಗೆಟ್ಟಾಗ ಅನಿರೀಕ್ಷಿತ ದಿಕ್ಕುಗಳಿಂದ ಸಹಾಯ ಒದಗಿಸಿದೆ, ಎಂದಷ್ಟೇ ಅವರು ಹೇಳಬಲ್ಲರು. ಯಾವುದೇ ಬಾಳಿಗೆ ಹುರುಳು ತುಂಬುವುದು ಇಂಥ ನಂಬಿಕೆಯೇ ತಾನೆ.

ಯಾವುದೇ ಭಾಷೆ–ಸಾಹಿತ್ಯದಲ್ಲಿ ಗಾದೆ, ಸೂಕ್ತಿ, ಸುಭಾಷಿತಗಳು ವಿಪುಲವಾಗಿರುತ್ತವೆ. ಅವು ಆಯಾ ಜನಾಂಗದ ಅನುಭವದ ಕೆನೆ ಹಾಗೂ ವಿವೇಕದ ಹರಳುಗಳು. ಅವುಗಳ ಅನುಸಂಧಾನದಿಂದ ಸಂತೋಷ ಮಾತ್ರವಲ್ಲ, ಸಂಸ್ಕಾರವೂ ಉಂಟಾಗುತ್ತದೆ; ಬಾಳಿಗೆ ಬೆಳಕು ಲಭಿಸುತ್ತದೆ. ಇಂತಹ ಸೂಕ್ತಿಸಂದೋಹ ಅನರ್ಘ್ಯವಾದ ಅಂತರಂಗ ಸಂಪತ್ತು. ಅದನ್ನು ಎಲ್ಲರಿಗೂ ದೊರಕಿಸಿಕೊಡಬೇಕೆಂಬುದು ಅಚ್ಚಪ್ಪನವರ ಪ್ರತಿಜ್ಞೆ; ಅದಕ್ಕಾಗಿ ಅವರ ಅವಿರತವಾದ ದುಡಿಮೆ. ಪುಸ್ತಕಭಂಡಾರವೇ ಅವರ ನಿಜ ನಿವಾಸ; ಪುಸ್ತಕಗಳೇ ಅವರ ಉಸಿರು; ಸತ್ತವರ ಸಂಗದಲ್ಲಿ ಹೊತ್ತು ಕಳೆಯುವುದೇ ಅವರ ಕಸುಬು.

ಕನ್ನಡ ಗಾದೆಗಳು (1944) ಅಚ್ಚಪ್ಪನವರು ಹೊರತಂದ ಮೊದಲ ಪುಸ್ತಕ. ಆ ಕಾಲಕ್ಕೆ ಕನ್ನಡದಲ್ಲಿ ಗಾದೆಗಳ ಸಂಕಲನಗಳು ಹೆಚ್ಚೇನೂ ಪ್ರಕಟವಾಗಿರಲಿಲ್ಲ. ಮಂಗಳೂರಿನ ಬಾಸೆಲ್ ಮಿಷನ್ನಿನವರ ಒಂದು ಸಂಗ್ರಹವನ್ನು ಬಿಟ್ಟರೆ ಅಚ್ಚಪ್ಪನವರ ಪುಸ್ತಕವೇ ಆ ಕ್ಷೇತ್ರದಲ್ಲಿ ಮೊದಲನೆಯದು. "ಅಚ್ಚಪ್ಪನವರು ಈ ಸಂಗ್ರಹದಿಂದಾಗಿ ಗಾದೆಗಳ ಅಚ್ಚಪ್ಪನವರೆಂದೇ ಪರಿಚಿತರಾದರು." ಅವರು ಸಂಪಾದಿಸಿರುವ The Way to success and Happiness (1957) ಎಂಬ ಆಂಗ್ಲ ಸೂಕ್ತಿ ಸಂಕಲನವೂ ಸಾಕಷ್ಟು ಜನಪ್ರಿಯವಾಗಿದೆ.

ಅಚ್ಚಪ್ಪನವರ ಈ ಬಗೆಯ ಕೆಲಸ ಅತ್ಯುತ್ತಮ ಫಲ ಕೊಟ್ಟಿರುವುದು ಗ್ರಂಥಸ್ಥ ಗಾದೆಗಳು (1969) ಎಂಬ ಹೆಬ್ಬೊತ್ತಗೆಯಲ್ಲಿ. ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಹೇರಳವಾಗಿರುವ ನಾಣ್ಣುಡಿಗಳನ್ನು ಹೆಕ್ಕಿ ಈ ಗ್ರಂಥದಲ್ಲಿ ಶಾಸ್ತ್ರೀಯವಾಗಿ ಸಾಲುಗೊಳಿಸಿದ್ದಾರೆ ಅಚ್ಚಪ್ಪನವರು. ಇಲ್ಲಿ ಕಂಡುಬರುವ ಅವರ ಶ್ರದ್ಧೆ, ತಾಳ್ಮೆ ಮತ್ತು ವ್ಯಾಸಂಗ ವಿಸ್ತಾರಗಳನ್ನು ಮೆಚ್ಚದಿರುವುದು ಸಾಧ್ಯವಿಲ್ಲ. ಪುಸ್ತಕಕ್ಕೆ ಮುನ್ನುಡಿ ಬರೆದಿರುವ ದಿ॥ ಡಾ. ಜಿ. ಪಿ. ರಾಜರತ್ನಂ ಅವರ ಈ ಮಾತುಗಳು ಗಮನಾರ್ಹವಾಗಿವೆ: "ಈ ಸಂಕಲನದಲ್ಲಿ ಬರಿಯ ಗಾದೆಗಳಷ್ಟೇ ಅಲ್ಲ, ಗಾದೆಗಳ ಜ್ಞಾತಿಗಳೂ ಬಂದು ಸೇರಿಕೊಂಡಿದ್ದಾರೆ. ಉಪಮಾನಗಳು, ದೃಷ್ಟಾಂತಗಳು, ನ್ಯಾಯಗಳು, ಸೂಕ್ತಿಗಳು, ಸುಭಾಷಿತಗಳು ಎಲ್ಲ

ಇಲ್ಲಿವೆ. ಕನ್ನಡ ಕಾವ್ಯಗಳೊಳಗಿನ ದುಮಾ ವಾಕ್ಯಗಳ ಜೊತೆಗೆ ಅವರು ಬಳಸಿಕೊಂಡ ಸಂಸ್ಕೃತದ ಮಹಾವಾಕ್ಯಗಳೂ ಇಲ್ಲಿ ಸೇರ್ಪಡೆಯಾಗಿವೆ. ಒಂದು ರೀತಿಯಲ್ಲಿ ಈ ಕಲಸುಮೇಲೋಗರ ಸ್ವಾಗತಾರ್ಹವಾದ ಮೇಲೋಗರ—'ಕದಂಬ' ಎಂಬ ಅನ್ನವಿಶೇಷ ಇದ್ದ ಹಾಗೆ. ಈ ಸಂಕಲನವನ್ನು ಸಿದ್ಧಪಡಿಸಬೇಕಾದರೆ, ಕವಿರಾಜಮಾರ್ಗದ ಕಾಲದಿಂದ ಹಿಡಿದು ಮುದ್ದಣನ ವರೆಗಿನ ಅನೇಕ ಕಾವ್ಯಗಳನ್ನು ಇವರು ಪರಿಶೀಲಿಸಿದ್ದಾರೆ. ಯಾವ ಯಾವ ಕವಿಗಳನ್ನು ಯಾವ ಯಾವ ಕಾವ್ಯಗಳನ್ನು ನೋಡಿದ್ದಾರೆಂಬುದನ್ನು ಅನುಬಂಧದಲ್ಲಿ ಗುರುತಿಸಿದ್ದಾರೆ. ಪ್ರಾಚೀನ ಕಾವ್ಯಗಳನ್ನು ಕಣ್ಣಲ್ಲಿ ಕಣ್ಣಿಟ್ಟು ಓದಲು ಪ್ರಯತ್ನಿಸುವವರಿಗೆ ಇವರ ಪರಿಶ್ರಮವನ್ನು ಕಂಡು ವಿಸ್ಮಯವಾಗುತ್ತದೆ."

'ಗ್ರಂಥಸ್ಥ' ಗಾದೆಗಳಿಂದಲೇ ಅಚ್ಚಪ್ಪನವರ ಚೇತನ ತೃಪ್ತವಾಗಲಿಲ್ಲ. ಅದು ಸರೋವರದಿಂದ ಸಮುದ್ರಕ್ಕೆ ಯಾನ ಮಾಡಿತು. ಆ ರತ್ನಾಕರ ಪರಿಶೋಧನದಿಂದ ಸಿದ್ಧವಾಗಿದೆ ಸಂಸ್ಕೃತ ಲೋಕೋಕ್ತಿಗಳು ಮತ್ತು ಕವಿಸೂಕ್ತಿಗಳು ಎಂಬ ಬೃಹತ್ ಕೃತಿ. ಇದಿನ್ನೂ ಬೆಳಕು ಕಾಣಬೇಕಾಗಿದೆ; ಕಂಡಾಗ, ಕನ್ನಡಿಗರಿಗೊಂದು ನವನಿಧಿ ಪ್ರಾಪ್ತವಾಗುವುದರಲ್ಲಿ ಸಂದೇಹವಿಲ್ಲ. ಕನ್ನಡದಲ್ಲಿ ಸಂಸ್ಕೃತ ಸುಭಾಷಿತಗಳ ಸಂಗ್ರಹಗಳು ಕೆಲವಿವೆ; ಆದರೆ ಅಚ್ಚಪ್ಪನವರ ಸಂಕಲನದ ಸಮಗ್ರತೆ ಬೇರಾವುದಕ್ಕೂ ಇಲ್ಲ. ರಾಮಾಯಣ ಭಾರತಗಳಿಂದ ಆರಂಭಿಸಿ, ಎಲ್ಲ ಸಂಸ್ಕೃತ ಕೃತಿಗಳಲ್ಲಿ ಮತ್ತು ಸುಭಾಷಿತ ಕೋಶಗಳಲ್ಲಿ ಕಂಡುಬರುವ ಸೂಕ್ತಿಗಳನ್ನಾಯ್ದು ಅಕಾರಾದಿಯಾಗಿ ಅಳವಡಿಸಿ, ಅನುವಾದ ಸಹಿತ ಕೊಡಲಾಗಿದೆ. ಇಂಥ ಸೂಕ್ತಿಗಳ ಸಂಖ್ಯೆ ಸುಮಾರು ಹತ್ತು ಸಾವಿರ; ಇವು ಕನಿಷ್ಠ ಒಂದು ಸಾವಿರ ಪುಟಗಳ ಗ್ರಂಥವನ್ನು ಸುಲಭವಾಗಿ ರೂಪಿಸುತ್ತವೆ. ಈ ಬೃಹತ್ತಿಗೆ ಬೆದರಿ ಅಚ್ಚಪ್ಪನವರು ಸೂಕ್ತಿಗಳನ್ನು ಸಾಧ್ಯವಾದ ಮಟ್ಟಿಗೆ ತೆಗೆಯುತ್ತಿದ್ದಾರೆ!

ಇಂಥ ಸಂಕಲನದ ಪ್ರಯೋಜನವೇನೆಂಬುದನ್ನು ಒತ್ತಿಹೇಳಬೇಕಾಗಿಲ್ಲ. ಭೂತ-ವರ್ತಮಾನಗಳಿಗೆ ಸೇತುವೆ ಕಟ್ಟುವ, ಪರಂಪರೆಯ ಸಾಕ್ಷಾತ್ಕಾರಕ್ಕೆ ಅನುವು ಮಾಡಿಕೊಡುವ, ಸಂಸ್ಕೃತಿಯ ಮೇಲೆ ಬೆಳಕು ಚೆಲ್ಲುವ, ಹಾಗೂ ಜೀವನ ಮೌಲ್ಯಗಳ ಪ್ರಜ್ಞೆಯನ್ನುಂಟುಮಾಡುವ, ಜೊತೆಗೆ ಆಹ್ಲಾದವನ್ನೂ ಬೀರುವ ಕೆಲಸವನ್ನು ಸೂಕ್ತಿಗಳು ಮಾಡುತ್ತವೆ. ಅವುಗಳ ಸಂಚಯ ಮತ್ತು ವಿತರಣೆ ಸಾರ್ಥಕವೂ ಅಭಿನಂದನೀಯವೂ ಆದ ಉದ್ಯಮ.

ತಾವು ಸಂಪಾದಿಸಿರುವ ಕೃತಿಗಳನ್ನೆಲ್ಲಾ ತಾವೇ ಪ್ರಕಟಿಸಿಕೊಂಡಿದ್ದಾರೆ ಅಚ್ಚಪ್ಪನವರು. ಈ ಪ್ರಯತ್ನದಲ್ಲಿ ಅವರು ಕೈ ಸುಟ್ಟುಕೊಂಡಿರಬಹುದೇ ಹೊರತು ಲಾಭವನ್ನೇನೂ ಮಾಡಿಕೊಂಡಿಲ್ಲ. ಗ್ರಂಥಸ್ಥ ಗಾದೆಗಳು ಪುಸ್ತಕದ ಪ್ರಕಟಣೆಗೆ ಕೇಂದ್ರ ಸರ್ಕಾರದ ಧನಸಹಾಯ ಸಿಕ್ಕಿತು. ಆದರೆ ಪ್ರತಿಗಳು ಖರ್ಚಾಗದೆ ಸಾಕಷ್ಟು ಸಂಖ್ಯೆಯಲ್ಲಿ ಉಳಿದಿವೆ; ಅವುಗಳನ್ನು ಮನೆಯಲ್ಲಿ ಸಂರಕ್ಷಿಸುವ ಜವಾಬ್ದಾರಿ ಬೇರೆ. ಸಂಸ್ಕೃತ ಲೋಕೋಕ್ತಿಗಳು ಮತ್ತು ಕವಿಸೂಕ್ತಿಗಳು ಕೃತಿಯ ಪ್ರಕಟಣೆಗೆ ಕರ್ನಾಟಕ ಸರ್ಕಾರದ ಶಿಕ್ಷಣ ಇಲಾಖೆ ಸ್ವಲ್ಪ ನೆರವು ನೀಡಿದೆ; ಅದು ಸಾಲದು. ಗ್ರಂಥಕ್ಕೆ ಪ್ರಕಟಣಪೂರ್ವ ರಿಯಾಯಿತಿ ಬೆಲೆಯನ್ನು ಅಚ್ಚಪ್ಪನವರು ಗೊತ್ತುಮಾಡಿದ್ದಾರೆ; ಪ್ರತಿಕ್ರಿಯೆ ನಿರೀಕ್ಷಿಸಿದಷ್ಟು ಉತ್ತೇಜನಕಾರಿಯಾಗಿಲ್ಲ. ಕೇಂದ್ರ ಸರ್ಕಾರದ ನೆರವನ್ನು ಕೋರಿ ವ್ಯವಹರಿಸುತ್ತಿದ್ದಾರೆ; ತೃಪ್ತಿಕರವಾದ ಉತ್ತರ ಬಂದಿಲ್ಲ.

ರಾಜ್ಯ ಸರ್ಕಾರ ಅಚ್ಚಪ್ಪನವರಿಗೆ ಒಂದು ನೂರು ರೂ.ಗಳ ಮಾಸಾಶನ ನೀಡುತ್ತಿದೆ. ಇಂದಿನ ದಿನಗಳಲ್ಲಿ ಈ ಮೊತ್ತದ ಬೆಲೆ ಎಷ್ಟೆಂಬುದು ಎಲ್ಲರಿಗೂ ಗೊತ್ತು. ಹೇಗೋ ಆಹನ್ಯಹನಿ ಜೀವನ ನಡೆಸಿದ್ದಾರೆ ಅಚ್ಚಪ್ಪನವರು. ಸರ್ಕಾರ ಮತ್ತು ಜನತೆ ಅವರಿಗೆ ಇನ್ನಷ್ಟು ಸಹಾಯ ಮಾಡಬಹುದು, ಮಾಡಬೇಕು. ಅದು ಕೃತಜ್ಞತೆಯ ನಿಲುವಿನಿಂದ ಆಗಬಹುದು, ಉಪಕಾರ ಬುದ್ಧಿಯ ನಿಲುವಿನಿಂದಲೂ ಆಗಬಹುದು. ಪ್ರತಿಯಾಗಿ ಅಚ್ಚಪ್ಪನವರು ಹೆಚ್ಚುಹೆಚ್ಚು ದುಡಿಯಲು ಸಿದ್ಧರಿದ್ದಾರೆ; ಅರುವತ್ತರ ಗಡಿಯಲ್ಲೂ ಅವರ ಉತ್ಸಾಹದ ನೆರೆ ಇಳಿದಿಲ್ಲ. ಇಂತಹವರಿಂದ ಕೆಲಸ ಮಾಡಿಸಿಕೊಳ್ಳುವುದು ಹೇಗೆಂಬುದನ್ನು ಸಮಾಜ ಯೋಚಿಸಬೇಕು; ಆ ದಿಸೆಯಲ್ಲಿ ತನ್ನ ಕರ್ತವ್ಯವನ್ನು ಮರೆಯಬಾರದು.

ವ್ಯವಹಾರ ಪ್ರಪಂಚಕ್ಕೆ ಹೇಳಿಸಿದವರಲ್ಲ ಅಚ್ಚಪ್ಪನವರು. ಆದರೆ ಅವರಂತಹ ಕೆಲವರಾದರೂ ಇಲ್ಲದಿದ್ದರೆ ಕೆಲವು ಒಳ್ಳೆಯ ಕೆಲಸಗಳಾಗುವುದಿಲ್ಲ ಎಂಬುದೂ ಅಷ್ಟೇ ಸತ್ಯ. ಏನೇ ಇರಲಿ, ಅಚ್ಚಪ್ಪನವರು ಇಂದು ಅಗತ್ಯದಲ್ಲಿದ್ದಾರೆ. ಅವರು ಯಾವೊಂದು ಕಲ್ಲನ್ನೂ ಜರುಗಿಸದೆ ಬಿಟ್ಟಿಲ್ಲ, ಯಾರನ್ನೂ ಕಾಣದೆ ಬಿಟ್ಟಿಲ್ಲ. ಎಲ್ಲ ಕಡೆಯಿಂದಲೂ ಅವರಿಗೆ ಸಹಾನುಭೂತಿ ಧಾರಾಳವಾಗಿ ಸಿಕ್ಕಿದೆ. ಆದರೆ ಅಷ್ಟೇ ಸಾಕೆ?

---

(ಮೇಲ್ಕಂಡ ಲೇಖನವನ್ನು ಪ್ರೊಫೆಸರ್ ಸಿ. ಪಿ. ಕೃಷ್ಣಕುಮಾರ್ ಅವರು (ಡಾ|| ಸಿ. ಪಿ. ಕೆ.) ಈ ಕಿರುಹೊತ್ತಗೆಯಲ್ಲಿ ಸೇರಿಸಿಕೊಳ್ಳಲು ಅನುಮತಿ ಇತ್ತುದಕ್ಕಾಗಿ ಇದರ ಸಂಪಾದಕನು ಅವರಿಗೆ ಅತ್ಯಂತ ಕೃತಜ್ಞತೆಯಿಂದ ವಂದನೆಗಳನ್ನು ಸಲ್ಲಿಸುತ್ತಾನೆ).

# ಕೆಲವು ಮಾದರಿ ಸೂಕ್ತಿಗಳು

ಅಬಂಧುಷ್ವಪಿ ಬಂಧುತ್ವಂ ಸ್ನೇಹಾತ್ ಸಮುಪಜಾಯತೇ ।
ಬಂಧುಷ್ವಪಿ ಚ ಬಂಧುತ್ವಂ ಅಲೋಕಜ್ಞೇಷು ಹೀಯತೇ ॥ (ಸುಭಾಷಿತಾವಲಿ)

ಸ್ನೇಹವಿದ್ದರೆ ಬಂಧುಗಳಲ್ಲದವರಲ್ಲೂ ಬಾಂಧವ್ಯವುಂಟಾಗುತ್ತದೆ. ಬಂಧುಗಳಾಗಿದ್ದರೂ ಲೋಕಜ್ಞಾನವಿಲ್ಲದವರಲ್ಲಿ ಬಾಂಧವ್ಯವು ನಶಿಸುತ್ತದೆ.

ಅಲುಬ್ಧೈಃ ಸಹ ಸೌಹಾರ್ದಂ ಪಂಡಿತೈಃ ಸಹ ಸಂಕಥಾ ।
ಉತ್ತಮೈಃ ಸಹ ಸಂಗಶ್ಚ ವಿಧೇಯಃ ಸುಖಮಿಚ್ಛತಾ ॥

(ಮಹಾ ಸುಭಾಷಿತ ಸಂಗ್ರಹ, ಸಂಪುಟ–2)

ಲೋಭವಿಲ್ಲದವರೊಡನೆ ಗೆಳೆತನ, ಜ್ಞಾನಿಗಳೊಡನೆ ಮಾತುಕತೆ, ಉತ್ತಮರೊಡನೆ ಸಹವಾಸ—ಸುಖವನ್ನು ಬಯಸುವವನು ಇದನ್ನು ಮಾಡಬೇಕು.

ಅಯಂ ಪ್ರಭುರಯಂ ಭೃತ್ಯ ಇತಿ ಯಾ ಜಗತಃ ಸ್ಥಿತಿಃ ।
ಫಲಂ ವಿಜಯತೇ ತತ್ರ ಶ್ರೀಪ್ರಸಾದಾಪ್ರಸಾದಯೋಃ ॥ (ಸೂಕ್ತಿಮುಕ್ತಾವಲಿ)

ಇವನು ಪ್ರಭು, ಇವನು ದಾಸ ಎಂಬ ಈ ಜಗತ್ತಿನ ಸ್ಥಿತಿಯಲ್ಲಿ ಲಕ್ಷ್ಮೀ ಪ್ರಸನ್ನತೆ ಮತ್ತು ಅಪ್ರಸನ್ನತೆಯ ಫಲವು ಮೇಲ್ಮೆಯನ್ನು ಹೊಂದುತ್ತದೆ. (ಅಂದರೆ, ಲಕ್ಷ್ಮೀ ಕಟಾಕ್ಷವುಳ್ಳವನೇ ಪ್ರಭು ಅದಿಲ್ಲದವನೇ ದಾಸ).

ಅಹನ್ಯಹನಿ ಬೋದ್ಧವ್ಯಂ ಕಿಮದ್ಯ ಸುಕೃತಂ ಕೃತಂ ।
ದತ್ತಂ ವಾ ದಾಪಿತಂ ವಾಪಿ ಸಾಹಾಯ್ಯಮಪಿ ವಾಕ್ಕೃತಂ ॥

(ಮಹಾ ಸುಭಾಷಿತ ಸಂಗ್ರಹ, ಸಂಪುಟ–2)

ನಾನಿಂದು ಯಾವ ಒಳ್ಳೆಯ ಕೆಲಸವನ್ನು ಕೈಕೊಂಡೆ, ಏನನ್ನು ಕೊಟ್ಟೆ, ಏನನ್ನು ಕೊಡಿಸಿದೆ ಅಥವಾ ಮಾತಿನಿಂದಲಾದರೂ ಏನಾದರೂ ಸಹಾಯ ಮಾಡಿದೆನೆ? ಎಂಬುದನ್ನು ನಾವು ಪ್ರತಿ ದಿನವೂ ನೆನೆಸಿಕೊಳ್ಳಬೇಕು.

ದಕ್ಷಃ ಶ್ರಿಯಮಧಿಗಚ್ಛತಿ ಪಥ್ಯಾಶೀ ಸುಖಮರೋಗೀ ।
ಅಭ್ಯಾಸೀ ವಿದ್ಯಾಂತಂ ಧರ್ಮಾರ್ಥಯಶಾಂಸಿ ಚ ವಿನೀತಃ ॥ (ಸಮಯೋಚಿತ ಪದ್ಯಮಾಲಿಕಾ)

ಶಕ್ತನಾಗಿರುವವನು ಐಶ್ವರ್ಯವನ್ನು ಹೊಂದುತ್ತಾನೆ. ಪಥ್ಯವಾದುದನ್ನು ಉಣ್ಣುವವನು ಆರೋಗ್ಯವಂತನಾಗುತ್ತಾನೆ. ರೋಗವಿಲ್ಲದವನು ಸುಖಿಯಾಗುತ್ತಾನೆ. ಅಭ್ಯಾಸಶೀಲನು ವಿದ್ಯಾಪಾರಂಗತನಾಗುತ್ತಾನೆ. ವಿನಯಶೀಲನು ಧರ್ಮ, ಅರ್ಥ, ಯಶಸ್ಸುಗಳನ್ನು ಪಡೆಯುತ್ತಾನೆ.

ಪ್ರಿಯವಚನವಾದೀ ಪ್ರಿಯೋ ಭವತಿ ವಿಮೃಶಿತಕಾರ್ಯಕರೋಽಧಿಕಂ ಜಯತಿ ।
ಬಹುಮಿತ್ರಕರಃ ಸುಖಂ ವಸತೇ ಯಶ್ಚ ಧರ್ಮರತಃ ಸ ಗತಿಂ ಲಭತೇ ॥ (ಮಹಾಭಾರತ)

ಪ್ರಿಯವಾದ ಮಾತನ್ನಾಡುವವನು (ಸರ್ವರಿಗೂ) ಪ್ರಿಯನಾಗುತ್ತಾನೆ. ಕಾರ್ಯವನ್ನು ವಿಮರ್ಶಿಸಿ ಮಾಡುವವನು ಹೆಚ್ಚು ಜಯಶಾಲಿಯಾಗುತ್ತಾನೆ. ಬಹುಮಂದಿ ಮಿತ್ರರನ್ನು ಮಾಡಿಕೊಂಡಿರುವವನು ಸುಖಿಯಾಗುತ್ತಾನೆ. ಧರ್ಮರತನು ಸದ್ಗತಿಯನ್ನು ಹೊಂದುತ್ತಾನೆ.

ದಿವಸೇನೈವ ತತ್ಕುರ್ಯಾತ್ ಯೇನ ರಾತ್ರೌ ಸುಖಂ ವಸೇತ್ ।
ಅಷ್ಟಮಾಸೇನ ತತ್ಕುರ್ಯಾತ್ ಯೇನ ವರ್ಷಂ ಸುಖಂ ವಸೇತ್ ॥ (ಮಹಾಭಾರತ)

ರಾತ್ರಿಯಲ್ಲಿ ಹಾಯಾಗಿರಬೇಕಾದರೆ ನಮ್ಮ ಕೆಲಸಗಳನ್ನು ಹಗಲಿನಲ್ಲೇ ಮುಗಿಸಬೇಕು. ವರ್ಷವೂ ಸುಖವಾಗಿರಬೇಕಾದರೆ ನಮ್ಮ ಕೆಲಸವನ್ನು ಎಂಟು ತಿಂಗಳಲ್ಲೇ ಮಾಡಿಬಿಡಬೇಕು.

ಅರ್ಥಾನ್ ಬ್ರೂಯಾತ್ ನ ಚಾಸತ್ಸು ಗುಣಾನ್ ಬ್ರೂಯಾತ್ ನ ಚಾತ್ಮನಃ ।
ಆದದ್ಯಾತ್ ನ ಚ ಸಾಧುಭ್ಯೋ ನಾಽಸತ್ಪುರುಷಮಾಶ್ರಯೇತ್ ॥

ನೀಚರಲ್ಲಿ ತನ್ನ ಐಶ್ವರ್ಯ ಕುರಿತು ಹೇಳಬಾರದು. ತನ್ನ ಗುಣಗಳನ್ನು ಹೇಳಿಕೊಳ್ಳಬಾರದು. ಸಜ್ಜನರಿಂದ ಏನನ್ನೂ ತೆಗೆದುಕೊಳ್ಳಬಾರದು. ನೀಚನನ್ನು ಆಶ್ರಯಿಸಬಾರದು.

ದಾನಾಯ ಲಕ್ಷ್ಮೀಃ ಸುಕೃತಾಯ ವಿದ್ಯಾ ಚಿಂತಾ ಪರಬ್ರಹ್ಮವಿನಿಶ್ಚಯಾಯ ।
ಪರೋಪಕಾರಾಯ ವಚಾಂಸಿ ಯಸ್ಯ ವಂದ್ಯಸ್ತ್ರಿಲೋಕೀತಿಲಕಃ ಸ ಏವ ॥
(ಶಾರ್ಙ್ಗಧರಪದ್ಧತಿ)

ಯಾರ ಸಂಪತ್ತು ದಾನಕ್ಕಾಗುತ್ತದೆಯೋ, ವಿದ್ಯೆ ಪುಣ್ಯಕ್ಕಾಗುತ್ತದೆಯೋ, ಧ್ಯಾನ ಪರಬ್ರಹ್ಮ ನಿಶ್ಚಯಕ್ಕಾಗುತ್ತದೆಯೋ, ಮಾತುಗಳು ಪರೋಪಕಾರಕ್ಕಾಗುತ್ತದೆಯೋ ಅಂಥಾ ಮಹಾತ್ಮನೇ ಮೂರು ಲೋಕಕ್ಕೂ ತಿಲಕಪ್ರಾಯನಾಗಿ ಗೌರವಾರ್ಹನಾಗುತ್ತಾನೆ.






# ಸಂಸ್ಕೃತ
# ಲೋಕೋಕ್ತಿಗಳು ಮತ್ತು ಕವಿಸೂಕ್ತಿಗಳು

ಈ ಪುಸ್ತಕವನ್ನು ನೀವು ಏತಕ್ಕೆ ಓದಬೇಕು ?

ಮನೋರಂಜನೆಗಾಗಿ
ವಿಷಯ ಸಂಗ್ರಹಣೆಗಾಗಿ
ಸದಭಿರುಚಿಯ ಬೆಳವಣಿಗೆಗಾಗಿ
ದೃಷ್ಟಿ ವೈಶಾಲ್ಯಕ್ಕಾಗಿ
ಭಾಷಾ ಪ್ರೌಢಿಮೆಗಾಗಿ

ಹೃದಯ ಪರಿಶುದ್ಧಿಗಾಗಿ
ಬುದ್ಧಿ ಸಂಸ್ಕಾರಕ್ಕಾಗಿ
ಆತ್ಮತೃಪ್ತಿಗಾಗಿ

ಇವೆಲ್ಲಕ್ಕಿಂತಲೂ ಮಿಗಿಲಾಗಿ, ಹಣಕ್ಕಿಂತಲೂ ಪ್ರಶಸ್ತವಾದ ನಿಮ್ಮ ಸಮಯದ ಸದ್ವಿನಿಯೋಗಕ್ಕಾಗಿ !